# ಕನ್ನಡ ವಿಶ್ವವಿದ್ಯಾಲಯ ಹಂಪಿ




"ವೈಕಂ ಮಹಮ್ಮದ್ ಬಷೀರ್ ರವರ ಆಯ್ದ ಕತೆಗಳಲ್ಲಿ ಸಾಮಾಜಿಕತೆ ಮತ್ತು ಸಂಘರ್ಷ" (ಅನುವಾದಗಳನ್ನು ಅನುಲಕ್ಷಿಸಿ)

ದಿವ್ಯ ಪಿ.ಸಿ
ಸಂಶೋಧನಾ ವಿದ್ಯಾರ್ಥಿನಿ
ನೋಂದಣಿ ಸಂಖ್ಯೆ : 141001030070



ಮಾರ್ಗದರ್ಶಕರು

ಡಾ॥ ಬಿ.ಎ ಅನ್ನದಾನೇಶ್
ಮುಖ್ಯಸ್ಥರು, ಕನ್ನಡ ವಿಭಾಗ
ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ
ಮಹಿಳಾ ಪದವಿ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು - 12




ಕಾವ್ಯಮಂಡಲ
ಬೆಂಗಳೂರು 2014-15

# ಕನ್ನಡ ವಿಶ್ವವಿದ್ಯಾಲಯ ಹಂಪಿ





## "ವೈಕಂ ಮಹಮ್ಮದ್ ಬಷೀರ್ ರವರ ಆಯ್ದ ಕತೆಗಳಲ್ಲಿ ಸಾಮಾಜಿಕತೆ ಮತ್ತು ಸಂಘರ್ಷ"(ಅನುವಾದಗಳನ್ನು ಅನುಲಕ್ಷಿಸಿ)

ದಿವ್ಯ ಪಿ.ಸಿ
ಸಂಶೋಧನಾ ವಿದ್ಯಾರ್ಥಿನಿ
ನೋಂದಣಿ ಸಂಖ್ಯೆ : 141001030070



*ಮಾರ್ಗದರ್ಶಕರು*

ಡಾ|| ಬಿ.ಎ ಅನ್ನದಾನೇಶ್
ಮುಖ್ಯಸ್ಥರು,ಕನ್ನಡ ವಿಭಾಗ
ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ
ಮಹಿಳಾ ಪದವಿ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು-12

ಕಾವ್ಯಮಂಡಲ
ಬೆಂಗಳೂರು 2014-15

## ಅಭ್ಯರ್ಥಿಯ ಪ್ರಮಾಣಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸಿರುವ **"ವೈಕಂ ಮಹಮದ್ ರವರ ಆಯ್ದ ಕತೆಗಳಲ್ಲಿ ಸಾಮಾಜಿಕತೆ ಮತ್ತು ಸಂಘರ್ಷ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಡಾ॥ ಬಿ.ಎ. ಅನ್ನದಾನೇಶ್ ಮುಖ್ಯಸ್ಥರು, ಕನ್ನಡ ವಿಭಾಗ, ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ಪದವಿ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು-560012 ಇವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಲಾಗಿದೆ. ಪ್ರಸ್ತುತ ನಿಭಂದವನ್ನು ಈ ಮೊದಲು ಯಾವುದೇ ವಿಶ್ವ ವಿದ್ಯಾಲಯದ ಪದವಿ ಅಥವಾ ಇತರ ಉದ್ದೇಶಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

**ದಿನಾಂಕ : 29-07-2015**
**ಸ್ಥಳ : ಬೆಂಗಳೂರು**

**ದಿವ್ಯ ಪಿ.ಸಿ**
**ಸಂಶೋಧನಾ ವಿದ್ಯಾರ್ಥಿನಿ**
ಪಾಕೇಗೌಡನ ಪಾಳ್ಯ,
ಸಿಲ್ವೇಪುರ ಪೋಸ್ಟ್,
ಬೆಂಗಳೂರು 560090

## ಮಾರ್ಗದರ್ಶಕರ ಸಮ್ಮತಿ ಪತ್ರ

ಈ ಮೂಲಕ ದೃಢೀಕರಿಸುವುದೇನೆಂದರೆ ದಿವ್ಯ ಪಿ.ಸಿ ಯವರು ಎಂ.ಫಿಲ್ ಪದವಿಗಾಗಿ **"ವೈಕಂ ಮಹಮದ್ ಬಷೀರ್ ರವರ ಕತೆಗಳಲ್ಲಿನ ಸಾಮಾಜಿಕತೆ ಮತ್ತು ಸಂಘರ್ಷ"** ಎಂಬ ಶೀರ್ಷಿಕೆಯಡಿ ಮಂಡಿಸಲಾಗುವ ನಿಬಂಧದ ಕಿರುಸಂಶೋಧನೆಗೆ ಮಾರ್ಗದರ್ಶನ ಮಾಡಲು ಸಮ್ಮತಿಸಿರುತ್ತೇನೆ. ಮತ್ತು ಈ ಮುನ್ನ ಈ ಸಂಶೋಧನೆಯ ಅಧ್ಯಾಯ ಅಥವಾ ನಿಬಂಧವನ್ನು ಎಲ್ಲಿಯೂ ಯಾವ ವಿಶ್ವವಿದ್ಯಾನಿಲಯದಲ್ಲೂ ಪ್ರಕಟಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : **29–07–2015**

ಸ್ಥಳ : ಬೆಂಗಳೂರು

ಮಾರ್ಗದರ್ಶಕರ ಸಹಿ

B. A Annadanesha.

ಡಾ. ಬಿ.ಎ. ಅನ್ನದಾನೇಶ್
ಮುಖ್ಯಸ್ಥರು, ಕನ್ನಡ ವಿಭಾಗ
ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ
ಪದವಿ ಕಾಲೇಜು , ಮಲ್ಲೇಶ್ವರಂ
ಬೆಂಗಳೂರು–560012

ಡಾ. ಬಿ.ಎ. ಅನ್ನದಾನೇಶ್
ಮುಖ್ಯಸ್ಥ... ...ಭಾಗ
ಮಹಾರಾಣಿ ಲಕ್ಷ್ಮಿ ... ...ವಿ ಕಾಲೇಜು
ಮಲ್ಲೇಶ್ವರಂ, ಬೆಂಗಳೂರು – 560 012

## ಪರಿವಿಡಿ

ಪುಟ ಸಂಖ್ಯೆ

# ಅಧ್ಯಾಯ –1

# ಪೀಠಿಕೆ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

# ಹಾಗೂ ಅಧ್ಯಯನದ ಮಹತ್ವ

# ಕೃತಿಕಾರನ ಪರಿಚಯ.

**ಪೀಠಿಕೆ :**

ದೇಸಿಸಾಹಿತ್ಯ ಚಳುವಳಿ,ವಚನ,ಕೀರ್ತನೆ,ಪಾಶ್ಚಾತ್ಯ ಸಾಹಿತ್ಯದ ಸಂಪರ್ಕದ ಪರಿಣಾಮವಾಗಿ ಭಾರತದ ಬೇರೆ ಬೇರೆ ಭಾಷಾ ಸಾಹಿತ್ಯಗಳಲ್ಲಿ ಹೊಸ – ಹೊಸ ಪ್ರಕಾರಗಳು ಮೂಡಿಬಂದ ಅಂಶ ಸರ್ವಕಾಲಿಕವಾದದ್ದು. ಭಾಷೆಯಲ್ಲಿಯೂ ಸಣ್ಣಕಥೆ ಎಂಬ ಸಾಹಿತ್ಯ ಪ್ರಕಾರ ಆವಿರ್ಭವಿಸಿದುದು ಇದೇ ರೀತಿಯಲ್ಲಿಯೇ.

"ವೈಕಂ ಮಹಮ್ಮದ್ ಬಷೀರ್" ಅವರು ಮಲೆಯಾಳಂನ ಪ್ರಸಿದ್ಧ ಲೇಖಕನಾಗಿ ಕಂಡು ಬರುತ್ತಾರೆ. ಇವರ ಬರಹದ ಶೈಲಿ, ಧಾಟಿ, ವಸ್ತು ವೈವಿಧ್ಯತೆ, ಪಾತ್ರಗಳ ನೈಜತೆ ಮುಂತಾದವುಗಳಲ್ಲಿ ಕ್ರಾಂತಿಕಾರಿ ಬದಲಾವಣೆಗಳನ್ನು ತೋರಿಸಿಕೊಡುವುದರ ಮೂಲಕ ತಮ್ಮದೇ ಆದ ವಿಶಿಷ್ಟ ಛಾಪನ್ನು ಒತ್ತಿದ ಬಷೀರ್ ಈ ಶತಮಾನ ಕಂಡ ವಿಸ್ಮಯ ಸೃಷ್ಟಿಕರ್ತ.

1935–1950 ರ ಕಾಲವನ್ನು ಮಲೆಯಾಳಂನ ಸಣ್ಣಕಥೆಗಳ ಸುವರ್ಣಯುಗವೆಂದು ಕರೆಯುತ್ತಾರೆ. ಹಾಲಿ ಇದ್ದ ಸಾಮಾಜಿಕ ಜೀವನದ ಪತನವೂ, ದಾರಿದ್ರ್ಯವೂ, ಕಷ್ಟನಷ್ಟಗಳೂ, ಹೃದಯಭೇದಕವಾದ ಶೋಷಣೆಯೂ, ಸ್ವಾತಂತ್ರ್ಯವಾಂಛೆಯೂ ಎಲ್ಲವೂ ವೈಕಂ ಮಹಮ್ಮದ್ ರವರ ಕಥೆಗಳಲ್ಲಿ ಸೇರಿ ಓದುಗರನ್ನು ಚಿಂತನೆಗೆ ಒಳಪಡಿಸಿವೆ. ಒಂದು ಸಮುದಾಯದಲ್ಲಿನ ಸಾಮಾಜಿಕ ಸ್ಥಿತಿಗತಿ ರೂಪುರೇಷೆಗಳನ್ನು ಕುರಿತಂತೆ ಇವರ ಕತೆಗಳು ರೂಪುಗೊಂಡಿವೆ. *1

ಬೇರೆ ಭಾಷೆಯ ಸಾಹಿತ್ಯವನ್ನು ಓದಬೇಕೆಂಬ ಅನಿಸಿಕೆಯಿಂದ ಹಾಗೂ ಬದುಕನ್ನು ನೋಡುವ ರೀತಿ ಮತ್ತು ಆಸಕ್ತಿ ಮೂಡಿಸುವಂತಹ ವಿಚಾರಧಾರೆ ವೈಕಂ ರವರ ಕಥೆಗಳಲ್ಲಿ ನನಗೆ ಕಂಡುಬಂದಿತು. ಆ ಕಾರಣದಿಂದಾಗಿ ನಾನು ಇವರ ಕತೆಗಳಿಗೆ ಸಂಬಂಧಿಸಿದಂತೆ ಅಧ್ಯಯನವನ್ನು ಮಾಡುವ ನಿರ್ಣಯ ಮಾಡಿದ್ದೇನೆ.

ಇವರ ಬರಹದ ಶೈಲಿ, ತಂತ್ರಗಾರಿಕೆ, ವಸ್ತುಸ್ಥಿತಿಯನ್ನು ಯಥಾವತ್ತಾಗಿ ಹೇಳುವಂತಹ ಮನೋಧರ್ಮ, ಮಾನವೀಯ ನೆಲೆಗಳು ಹೃದಯ ಮಿಡಿಯುತ್ತವೆ. ಹೇಳಬೇಕಾಗಿರುವ ಸಂಗತಿಯನ್ನು ನೇರವಾಗಿ ಸೂಕ್ಷ್ಮವಾಗಿ ಹೇಳುವಂತಹ ಗುಣ, ಶಕ್ತಿ ಇವರ ಬರಹಕ್ಕಿದೆ.

ಮನಮುಟ್ಟುವ, ಅನುಕಂಪ, ಸಹಾನುಭೂತಿ, ಹಾಗೂ ನೈಜ ಅನುಭವದಿಂದ ಕತೆಯನ್ನು ಕಟ್ಟುವಂತಹ ತಂತ್ರಗಾರಿಕೆ ಇವರಲ್ಲಿದೆ.

ಇವರ ಕತೆಗಳಲ್ಲಿ ಶ್ರೀ ಸಾಮಾನ್ಯನ ಬದುಕನ್ನು ಕುರಿತಂತೆ ಕಳವಳ,ಪ್ರೀತಿಯ ವಿಡಂಬನೆ, ಸಮಾಜದ ತಳ ಸಮುದಾಯದ, ಎಲ್ಲಾ ರೀತಿಯ ವೃತ್ತಿಯ ಜನರ ಆಚಾರ, ವಿಚಾರ, ಸ್ಥಿತಿಯನ್ನು ಕುರಿತು ಹೇಳಿರುವುದು ನನ್ನ ಅಧ್ಯಯನದ ಆಸಕ್ತಿಗೆ ಮತ್ತಷ್ಟು ಉತ್ಸಾಹ ಮೂಡಿದಂತಾಗಿದೆ.

ಪ್ರಸ್ತುತ ಸಮಾಜಕ್ಕೆ ಹತ್ತಿರವಾದಂತಹ ಕತೆಗಳು ಅನೇಕ ಆಯಾಮಗಳು ದೃಷ್ಟಿಕೋನಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ. ಇವರ ಕತೆ ಮತ್ತು ಕಾದಂಬರಿಯ ಸಾಹಿತ್ಯ ಕ್ಷೇತ್ರಕ್ಕೆ ಹೆಚ್ಚಿನ ಓದುಗರನ್ನು ಸೆಳೆಯುತ್ತದೆ. ಅಲ್ಲದೆ ಅವರು ತಮ್ಮ ಕತೆಗಳಲ್ಲಿ ತಂದಿರುವ ಪಾತ್ರಗಳು ಓದುಗರ ಅನುಭವಕ್ಕೆ ಹತ್ತಿರವಾಗಿ ಅವರನ್ನು ಚಿಂತನೆಗೆ ಈಡು ಮಾಡುತ್ತದೆ.

**ಭಾಷಾಂತರದ ಸಾಂಸ್ಕೃತಿಕ ನೆಲೆಗಳು**

ಆಧುನಿಕ ಯುಗದ ಶೈಕ್ಷಣಿಕ ಜ್ಞಾನ ಶಿಸ್ತುಗಳಲ್ಲಿ ಭಾಷಾಂತರವು ಕೇಂದ್ರಸ್ಥಾನ ಪಡೆದಿದೆ. ಇತ್ತೀಚೆಗೆ ದೇಶದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಪ್ರಾರಂಭವಾಗಿರುವ ಭಾಷಾಂತರ ಅಧ್ಯಯನ ವಿಭಾಗಗಳೇ ಇದಕ್ಕೆ ಸ್ಪಷ್ಟ ಸೂಚನೆಗಳಾಗಿವೆ. ಪ್ರತಿವರ್ಷವೂ ಭಾಷಾಂತರ ಅಧ್ಯಯನಗಳಿಗೆ ಸಂಬಂಧಿಸಿದಂತೆ ಪ್ರಪಂಚದಾದ್ಯಂತ ಪ್ರಕಟವಾಗುತ್ತಿರುವ ಗ್ರಂಥಗಳು ಹಾಗೂ ನಿಯತಕಾಲಿಕೆಗಳು ಇದಕ್ಕೆ ಸಾಕ್ಷಿಯಾಗಿವೆ. ಅದರಲ್ಲೂ ವಿಶೇಷವಾಗಿ ಇಂಡಿಯಾದ ಬಹುಭಾಷೆ ಮತ್ತು ಬಹುಸಂಸ್ಕೃತಿಗಳ ಸಂದರ್ಭದಲ್ಲಿ ಭಾಷಾಂತರವು ಅನೇಕ ಸಮಸ್ಯೆಗಳಿಗೂ ಕೀಲಿಕೈಯಾಗಿದೆ.

ಇಂದು ಭಾಷಾಂತರ ಅನ್ನುವ ಪ್ರಕ್ರಿಯೆ ಬರೀ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಲ್ಲ. ಸಾಹಿತ್ಯೇತರ ಜ್ಞಾನ ಶಿಸ್ತುಗಳಾದ ಪತ್ರಿಕೋದ್ಯಮ, ಧರ್ಮ, ವಿಜ್ಞಾನ, ವೈದ್ಯಕೀಯ, ತಂತ್ರಜ್ಞಾನ ಮುಂತಾದ ಕ್ಷೇತ್ರಗಳಿಗೂ ವ್ಯಾಪಿಸಿದೆ. ಪ್ರತಿದಿನವೂ ಭಾಷಾಂತರವು ವೈವಿಧ್ಯಮಯವಾಗಿ, ಅಪರಿಮಿತವಾಗಿ ಬೆಳೆಯುತ್ತಿದೆ. ಇಂದು ಇಂಡಿಯಾದಲ್ಲಿ ಅನೇಕ ವಿದ್ವಾಂಸರು ಭಾಷಾಂತರವನ್ನು ತಮ್ಮ ಬದುಕಿನ ಒಂದು ಬಹುಮುಖ್ಯ ಅಂಗವನ್ನಾಗಿ ಸ್ವೀಕರಿಸಿದ್ದಾರೆ. ಇದು ಅನೇಕ ಲೇಖಕರಿಗೆ ಪ್ರೋತ್ಸಾಹದಾಯಕವಾದ ಒಂದು ಜೀವನ ವೃತ್ತಿಯೂ ಆಗಿದೆ.

ಕೆಲವು ದಶಕಗಳ ಹಿಂದೆ ಭಾಷಾಂತರ ಎಂದರೆ, ಶುದ್ಧ ಸಾಹಿತ್ಯದ ಭಾಷಾಂತರ ಎಂಬ ಅರ್ಥದಲ್ಲಿ ಬಳಕೆಯಲ್ಲಿತ್ತು. ಜನತೆಯನ್ನು ಅಕ್ಷರಸ್ಥರನ್ನಾಗಿ ಮಾಡುವುದಕ್ಕಾಗಿ ಇದು ಒಂದು ಹವ್ಯಾಸ ಅಥವಾ ಕಾಲ ತುಂಬಿಸುವ ಒಂದು ಸಾಧನ ಎಂಬ ಅರ್ಥ ಇದಕ್ಕೆ ಇತ್ತು. ಅತ್ಯುತ್ತಮ ಭಾಷಾಂತರಕಾರರು ನಿರ್ಮಾಣವಾಗಬೇಕಾಗಿದೆ. ಯಾವುದೇ ಮಧ್ಯವರ್ತಿ ಭಾಷೆಯ ಮೂಲಕ ಭಾಷಾಂತರ ಮಾಡುವ ಬದಲು ಮೂಲ ಭಾಷೆಯಿಂದ ನೇರವಾಗಿ ಉದ್ದಿಷ್ಟ ಭಾಷೆಗೆ ಭಾಷಾಂತರ ಮಾಡು ಭಾಷಾಂತರಕಾರರು ನಿರ್ಮಾಣವಾಗಬೇಕಾಗಿದೆ ಎಂಬುದು ಇಂದಿನ ವಿದ್ಯಾಂಸರ ಅಭಿಪ್ರಾಯ.

ಪ್ರಾಚೀನ ಹಾಗೂ ಮಧ್ಯಕಾಲೀನ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಭಾಷಾಂತರ ಒಂದು ಅನುಸೃಷ್ಟಿಯ ಪ್ರಕ್ರಿಯೆಯಾಗಿತ್ತು. ಭಾಷೆ ಹಾಗೂ ಸಂಸ್ಕೃತಿಗಳ ನಡುವೆ ನಡೆಯುವ ಒಂದು ಭಾಷಿಕವಾದ, ಸಾಹಿತ್ಯಕವಾದ ಪ್ರಕ್ರಿಯೆ ಆಗಿತ್ತು. ವಸಾಹತುಶಾಹಿ ಸಂದರ್ಭಕ್ಕೆ ಅದು ರಾಜಕೀಯ ನೆಲೆಯವರೆಗೂ ವಿಸ್ತರಿಸಿತ್ತು. ಇಂದು ಜಾಗತೀಕರಣದ ಸಂದರ್ಭದಲ್ಲಿ ಭಾಷಾಂತರದ ಪರಿಕಲ್ಪನೆ ಎಲ್ಲ ವಲಯಗಳಿಗೂ ಹಬ್ಬುತ್ತಿದೆ.

ಭಾಷಾಂತರ ಎಂದರೆ ಕೇವಲ ಒಂದು ಭಾಷೆಯಿಂದ ಇನ್ನೊಂದು. ಭಾಷೆಗೆ ನಡೆಯುವ ಅರ್ಥಾಂತರ ಎಂದಲ್ಲ. ಅದು ಹೊಸ ಸೃಷ್ಟಿ ಕೂಡ ಅಗಿರುತ್ತದೆ. ಭಾಷಾಂತರದ ಅರ್ಥವ್ಯಾಪ್ತಿ ವಿಸ್ತರಿಸಿರುತ್ತದೆ ಮತ್ತು ವಿಸ್ತರಿಸಬೇಕಾಗುತ್ತದೆ. ಕಾವ್ಯ, ಕಥೆ, ಕಾದಂಬರಿ, ನಾಟಕ ಭಾಷಾಂತರ ಮಾಡುವಾಗ ಎಲ್ಲವೂ ಏಕರೀತಿಯಲ್ಲಿ ಇರುವುದಿಲ್ಲ. *2

ಕನ್ನಡ ನವೋದಯ ಕಾಲದ ಭಾಷಾಂತರ ಸೃಜನಶೀಲವಾದದ್ದು, ಎರಡು ಭಾಷೆಗಳು ಎರಡು ಸಂಸ್ಕೃತಿಗಳ ಪ್ರಜ್ಞೆಗಳು ಇಲ್ಲಿ ಮುಖಾಮುಖಿಯಾದವು. ಅವುಗಳ ನಡುವೆ ಸಂಘರ್ಷ, ಸಾಮರಸ್ಯ, ಏರ್ಪಟ್ಟಿತು.

ಹಳಗನ್ನಡಕ್ಕೆ ಸಂಸ್ಕೃತ ಪ್ರೇರಕ, ಪೋಷಕ, ಹೊಸಗನ್ನಡಕ್ಕೆ ಇಂಗ್ಲೀಷ್ ಪ್ರೇರಕ ಪೋಷಕ ಎಂಬ ವಿದ್ವಾಂಸರ ಅಭಿಪ್ರಾಯಗಳು ಇಂದು ಮರುಚಿಂತನೆಗೆ ಒಳಗಾಗುತ್ತಿವೆ 19ನೇಯ ಮತ್ತು 20ನೇ ಶತಮಾನದ ಅಡಿಯಲ್ಲಿ ಭಾಷಾಂತರ ಹೆಚ್ಚಾಗಿ ನಡೆದದ್ದು ರೂಪಾಂತರ ಅಳವಡಿಕೆಗಳ ಮೂಲಕವೇ.

ಭಾಷಾಂತರ ಎನ್ನುವುದು ನಮ್ಮ ದಿನನಿತ್ಯದ ಕ್ರಿಯೆಯಾಗಿರುವುದರಿಂದ ಪ್ರತಿಯೊಬ್ಬರೂ ಅದನ್ನೇ ಕುರಿತ ಅವ್ಯಕ್ತ ಅಭಿಪ್ರಾಯವನ್ನು ಹೊಂದಿರುತ್ತರೆ. ಲಿಖಿತ ಭಾಷಾಂತರ ನಮ್ಮ ದಿನನಿತ್ಯದ ಕ್ರಿಯೆಯಲ್ಲದಿದ್ದರೂ ಮೌಖಿಕ ಭಾಷಾಂತರದಲ್ಲಿ ನಾವು ಸದಾ ತೊಡಗಿರುತ್ತೇವೆ. ಭಾಷಾಂತರ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಅಥವಾ ಭಾಷೆಯೊಳಗಿನ ವಿವಿಧ ಪ್ರಭೇಧಗಳ ನಡುವೆ, ವಿವಿಧರೂಪ (ಆಕೃತಿ)ಗಳ ನಡುವೆ ನಡೆಯುವ ಕ್ರಿಯೆಯಾಗಿರಬಹುದು.

ಭಾಷಾಂತರದಲ್ಲಿ ಚಲನಾ ಕ್ರಿಯೆಯು ಬಹಳ ಪ್ರಮುಖವಾದದ್ದು. ಭಾಷಾಂತರದ ಸಾಮಾನ್ಯ ಬಳಕೆಯಲ್ಲಿ ಅರ್ಥವು ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಚಲಿಸುತ್ತದೆ. ಇದನ್ನು ರೋಮನ್ "ಯಾಕೊಬ್‌ಸನ್‌ನ ಪರಿಭಾಷೆಯಲ್ಲಿ ಹೇಳುವುದಾದರೆ, ಇಂಟರ್ ಟ್ರಾನ್ಸ್‌ಲೇಷನ್ ಎಂದಾಗುತ್ತದೆ. ಇದು ನಾವು ಭಾಷಾಂತರವೆಂದು ಗುರುತಿಸುವ ಸಾಮಾನ್ಯ ಕ್ರಿಯೆ ಹಾಗೆಯೇ ಒಂದೇ ಭಾಷೆಯಲ್ಲಿ ಅರ್ಥವು ತನ್ನ ಈಗಿನ ರೂಪವನ್ನು ತ್ಯಜಿಸಿ ಮತ್ತೊಂದು ರೂಪವನ್ನು ಧರಿಸುವುದನ್ನೂ ನಾವು ಭಾಷಾಂತರವೆಂದು ಗುರುತಿಸುತ್ತೇವೆ.

ಉದಾ: ಪಂಪನ ವಿಕ್ರಮಾರ್ಜುನ ವಿಜಯದ ಗದ್ಯಾನುವಾದ ಅಥವಾ ಸಣ್ಣ ಕಥೆಯೊಂದು ನಾಟಕ ಪಠ್ಯವಾಗಿ ರೂಪುಗೊಳ್ಳುವುದು. ಇದನ್ನು ಯೂಕೋಬ್‌ಸನ್ ಆಂತರಿಕ ಭಾಷಾಂತರ (ಇಂಟ್ರಾಟ್ರಾನ್ಸ್‌ಲೇಷನ್) ಎಂದು ಕರೆಯುತ್ತಾರೆ.

ಇವೆಲ್ಲವುಗಳಿಗೆ ಸಾಮಾನ್ಯವಾದದ್ದು ಅರ್ಥ ಚಲನೆ. ಚಲನೆಯನ್ನು ಬದಲಾವಣೆ ಎಂದು ನೋಡಬಹುದು. ಈ ಮೇಲೆ ವಿವರಿಸಿದ ಮೂರು ರೀತಿಯ ಭಾಷಾಂತರದಲ್ಲಿ ಅಥವಾ ತಾನು ಧರಿಸಿದ್ದ ಭಾಷಿಕ ಕವಚವನ್ನು ಅಥವಾ ರೂಪವನ್ನು ಅಥವಾ ಸಂಜ್ಞಾ ವ್ಯವಸ್ಥೆಯನ್ನು ಬಿಟ್ಟು ಬೇರೊಂದನ್ನು ಧರಿಸುತ್ತದೆ. ಇದನ್ನು ಬದಲಾವಣೆ ಎಂದು ಗುರುತಿಸಲು ಸಾಧ್ಯವಿದೆ. ಇಲ್ಲಿ ಬದಲಾವಣೆ ಕೇವಲ ಭಾಷೆ, ರೂಪ ಸಂಜ್ಞಾವ್ಯವಸ್ಥೆಗೆ ಸಂಬಂಧಿಸಿದ್ದಲ್ಲ. ಏಕೆಂದರೆ ಭಾಷೆ, ರೂಪ ಮತ್ತು ಸಂಜ್ಞಾವ್ಯವಸ್ಥೆಗಳು ಕೇವಲ ಅರ್ಥದ ಧಾರಕಗಳಲ್ಲ. ಅವು ಅರ್ಥವನ್ನು ರೂಪಿಸುತ್ತವೆ. ಒಂದು ನಿರ್ದಿಷ್ಟ ಭಾಷೆ, ರೂಪ ಮತ್ತು ಸಂಜ್ಞಾವ್ಯವಸ್ಥೆಯನ್ನು ಆಧರಿಸಿದಾಗ ಅದು ಮರುರೂಪವನ್ನು ಪಡೆಯುತ್ತದೆ. ಇದರರ್ಥ ಭಾಷೆ ರೂಪ ಮತ್ತು ಸಂಜ್ಞಾ ವ್ಯವಸ್ಥೆಗಳು ಪಾರದರ್ಶಕ ವಾಹಕಗಳಲ್ಲ. ಬದಲಿಗೆ ಅವು ಕ್ರಿಯಾಶೀಲ ಮಾಧ್ಯಮಗಳಾಗಿರುವುದರಿಂದ ಅವು ಅರ್ಥವನ್ನು ರೂಪಿಸುತ್ತವೆ. ಅದನ್ನು ಕ್ರಿಯಾಶೀಲ ಮಾದ್ಯಮಗಳಾಗಿರುವುದರಿಂದ ಅವು ಅರ್ಥವನ್ನು ರೂಪಿಸುತ್ತವೆ, ಅದನ್ನು ಕ್ರಿಯಾಶೀಲವಾಗಿ ಬದಲಾಯಿಸುತ್ತವೆ. ಅವುಗಳು ಅರ್ಥವನ್ನು ಒಂದು ಕಾಲ, ದೇಶದ ಮತ್ತೊಂದು ಕಾಲ ದೇಶಕ್ಕೆ ರವಾನಿಸುತ್ತವೆ. ರೂಪ / ಆಕೃತಿಗೂ ಅರ್ಥ/ ಆಶಯಕ್ಕೂ ಅವಿನಾಭಾವ ಸಂಬಂಧವಿದೆ. ಇವರೆಡರಲ್ಲಿ ಒಂದು ಬದಲಾದಾಗ ಮತ್ತೊಂದು ಬದಲಾಗುವುದು ಅನಿವಾರ್ಯವಾಗುತ್ತದೆ. ಭಾಷಾಂತರದಲ್ಲಿ ರೂಪ, ಭಾಷೆ / ಮತ್ತು ಸಂಜ್ಞಾವ್ಯವಸ್ಥೆ ಬದಲಾಗುವುದರಿಂದ ಅರ್ಥದಲ್ಲೂ / ಆಶಯದಲ್ಲೂ ಬದಲಾವಣೆ ಅನಿವಾರ್ಯ ಎನ್ನುವುದನ್ನೇ ಇತ್ತೀಚಿನ ಸಿದ್ಧಾಂತಗಳು ಪ್ರತಿಪಾದಿಸುತ್ತವೆ. ಈ ಹಿಂದೆ ಬದಲಾಗದಿರುವುದು ಭಾಷಾಂತರ ಎಂದು ಭಾವಿಸಲಾಗುತ್ತಿತ್ತು. ಎಂದು ಹೇಳುವುದು ಸೂಕ್ತ ಎನ್ನಿಸುತ್ತದೆ. ಈ ರೀತಿಯಾಗಿ ಭಾಷಾಂತರವನ್ನು ಪರಿಭಾವಿಸುವುದರಲ್ಲಿ ಆಗಿರುವ ಬದಲಾವಣೆಯ ಪರಿಣಾಮಗಳನ್ನು ಮುಂದೆ ಹೇಳಲಿದ್ದೇನೆ.

ಈ ಅನಿವಾರ್ಯತೆಯಿಂದ ಮಾತ್ರ ಭಾಷಾಂತರಗಳು ಬದಲಾಗುತ್ತವೇ ಎಂದೇನಲ್ಲ. ಇತರ ಕಾರಣಗಳಿಗಾಗಿಯೂ ಬದಲಾವಣೆ ಉಂಟಾಗಬಹದು. ಅವುಗಳನ್ನು ಸ್ಥೂಲವಾಗಿ ಇಲ್ಲಿ ಪಟ್ಟಿ ಮಾಡುತ್ತೇನೆ.

1. ವಿಭಿನ್ನ ಭಾಷೆ, ರೂಪ, ಸಂಜ್ಞಾವ್ಯವಸ್ಥೆಗಳ ನಡುವಿನ ವ್ಯತ್ಯಾಸಗಳು
2. ಅರ್ಥವು ಕೇವಲ ತನ್ನ ಹೊಸ ರೂಪವನ್ನು ಧರಿಸುವುದಷ್ಟೆ ಅಲ್ಲದೆ ಹೊಸ ಕಾಲ, ದೇಶವನ್ನೆ ಧರಿಸವುದುರಿಂದ / ಪ್ರವೇಶಿಸಿರುವುದರಿಂದಲೂ ಕಾಲ, ದೇಶಗಳು, ಅದರ ರೂಪ / ಆಳ್ವಿಕೆಯನ್ನು

ನಿರ್ಧರಿಸುತ್ತದೆ ಹೊಸ ಕಾಲ, ದೇಶವನ್ನೂ ಧರಿಸುವುದರಿಂದ/ಪ್ರವೇಶಿಸಿರುವುದರಿಂದಲೂ ಕಾಲ, ದೇಶಗಳು ಅದರ ರೂಪ/ ಆಕೃತಿಯನ್ನು ನಿರ್ಧರಿಸುತ್ತವೆ.

3. ಭಾಷಾಂತರ ಪ್ರಕ್ರಿಯೆಯಲ್ಲಿ ಕೇವಲ ವಿಭಿನ್ನ ಕಾಲ, ದೇಶ ಮತ್ತು ಭಾಷೆ, ರೂಪ ಸಂಜ್ಞಾವ್ಯವಸ್ಥೆಗಳಲ್ಲದೆ ನಡುವೆ ಸಕ್ರಿಯಾಶೀಲ ಏಜೆಂಟ್ ಸಹ ಕೆಲಸ ಮಾಢುತ್ತಿರುತ್ತದೆ. ಭಾಷಾಂತರಕಾರ/ರ್ತಿ ಯಂತ್ರ / ಕಂಪ್ಯೂಟರ್ ಭಾಷಾಂತರಗಳನ್ನು ಹೊರತುಪಡಿಸಿದರೆ ಉಳಿದ ಭಾಷಾಂತರಗಳಲ್ಲಿ ಈ ಏಜೆಂಟ್ ಮನುಷ್ಯ ಜೀವಿಯಾಗಿರುವುದರಿಂದ ಮತ್ತು ಸಾಮಾಜಿಕ ಜೀವಿಯಾಗಿರುವುದರಿಂದ ಅವರ ಮನಸ್ಸನ್ನು, ವಿಚಾರವನ್ನು, ಕ್ರಿಯೆಯನ್ನು ಪ್ರಭಾವಿಸುವ ಎಲ್ಲಾ ಅಂಶಗಳು ಅವರು ನಡೆಸುವ ಭಾಷಾಂತರವನ್ನು ಪ್ರಭಾವಿಸುವ ಸಾದ್ಯತೆ ಇರುತ್ತದೆ. ಆದ್ದರಿಂದ ಭಾಷಾಂತರವೆಂದರೆ ಚಲನೆ, ಬದಲಾವಣೆ ಎಂದೇ ನಾವು ಭಾವಿಸಬೇಕಾಗುತ್ತದೆ. *2

**ಭಾಷಾಂತರ ಅಧ್ಯಯನ :**

ಭಾಷಾಂತರದ ಅಧ್ಯಯನ ಎನ್ನುವುದು ಒಂದು ಹೊಸ ಅಧ್ಯಯನ ಕ್ಷೇತ್ರ ಭಾಷಾಂತರ ಕುರಿತು ಜ್ಞಾನವನ್ನೇ ಇದು ಒಳಗೊಂಡಿರುತ್ತದೆ. ಭಾಷಾಂತರ ಎನ್ನುವುದು ಭಾಷೆಗಳಷ್ಟೇ ಹಳೆಯ ಕ್ರಿಯೆಯಾಗಿರುವುದರಿಂದ ಆ ಕ್ರಿಯೆಯನ್ನು ಕುರಿತ ಜ್ಞಾನವೂ ಅಷ್ಟೇ ಹಳೆಯದಾದದ್ದು. ಆದರೆ ಈ ಜ್ಞಾನವು ಆ ಕ್ರಿಯೆಯಲ್ಲಿ ತೊಡಗಿದ್ದವರು ತಮ್ಮ ಅನುಭವವನ್ನು ಆಧರಿಸಿ ರೂಪಿಸಿದ್ದಾಗಿತ್ತು. ಈ ಅನುಭವ ರೂಪಿತ ಭಾಷಾಂತರ ಕುರಿತ ಜ್ಞಾನವು ಭಾಷಾಂತರ ಪಠ್ಯಗಳ ಮುನ್ನುಡಿಯಲ್ಲಿ ಅಥವಾ ಭಾಷಾಂತರಕಾರರ ಇತರ ಬಿಡಿ ಬರಹಗಳಲ್ಲಿ ಹೇಳಿಕೆಗಳಲ್ಲಿ ಅಡಕವಾಗಿತ್ತು. ಅದು ವ್ಯವಸ್ಥಿತ ರೂಪವನ್ನು ಪಡೆಯಲಿಲ್ಲ. ಆ ರೀತಿಯ ವ್ಯವಸ್ಥಿತ ರೂಪವನ್ನು ಭಾಷಾಂತರ ಕುರಿತ ಜ್ಞಾನಕ್ಕೆ ನೀಡುವ ಯತ್ನಗಳು ಸಹ ಹಿಂದೆ ನಡೆದಿವೆ. ಯಾವಾಗ ಸಾಂಸ್ಥಿಕ ರೂಪದಲ್ಲಿ ಬೃಹತ್ ಪ್ರಮಾಣದಲ್ಲಿ ಭಾಷಾಂತರಗಳು ನಡೆಯುವ ಅಗತ್ಯ ಉಂಟಾಗಿದೆಯೋ ಹಾಗೆಲ್ಲ ಭಾಷಾಂತರಕಾರರಿಗೆ ಮಾರ್ಗದರ್ಶಿ ಸೂತ್ರಗಳನ್ನು ನೀಡುವ ಸಲುವಾಗಿ ಭಾಷಾಂತರ ಕುರಿತ ಜ್ಞಾನವನ್ನೇ ವ್ಯವಸ್ಥಿತ ರೂಪಕ್ಕೆ ಒಳಪಡಿಸಲು ಪ್ರಯತ್ನಗಳು ನಡೆದಿವೆ.

ಉದಾ: ಬೈಬಲ್ ಭಾಷಾಂತರ ಅದೇ ರೀತಿ ಯುರೋಪಿನ ಭಾಷೆಗಳು ಗ್ರೀಕ್ ಮತ್ತು ಲ್ಯಾಟಿನ್‌ಗಳನ್ನು ಆಧರಿಸಿ ತಮ್ಮನ್ನು ರಾಷ್ಟ್ರಭಾಷೆಗಳಾಗಿ ಪ್ರಬುದ್ಧ ಭಾಷೆಗಳಾಗಿ ರೂಪಿಸಿಕೊಳ್ಳುವ ಸಂದರ್ಭದಲ್ಲೂ ಈ ರೀತಿಯ ಬಿಡಿ ಪ್ರಯತ್ನಗಳು ಕಂಡು ಬರುತ್ತವೆ.

ಇದಲ್ಲದೆ ಭಾಷಾಂತರ ಕುರಿತ ವ್ಯವಸ್ಥಿತ ಜ್ಞಾನವು ಇತರ ಜ್ಞಾನಶಾಖೆಗಳ ಭಾಗವಾಗಿ ಮೂಡಿದೆ. ಅವುಗಳ ಉಪಶಾಖೆಗಳಲ್ಲಿ ಈ ಕೆಲಸ ನಡೆದಿದೆ. ಹೆಚ್ಚಾಗಿ ತತ್ವಜ್ಞಾನ, ಭಾಷಾವಿಜ್ಞಾನ, ತೌಲನಿಕ ಸಾಹಿತ್ಯ, ಧರ್ಮಶಾಸ್ತ್ರ, ಮಾನವಶಾಸ್ತ್ರಗಳಲ್ಲಿ ಭಾಷಾಂತರ ಕುರಿತ ಜ್ಞಾ

**ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :**

ಇಂದಿನ ದಿನಗಳಲ್ಲಿ ಸಾಹಿತ್ಯವನ್ನು ನೋಡುವ ಕ್ರಮ ಮತ್ತು ಓದುವ ವಿಧಾನ ಆಲೋಚನೆಗಳಲ್ಲಿನ ದೃಷ್ಟಿಕೋನವು ಬದಲಾವಣೆಯಾಗಬೇಕಾಗಿದೆ. ಪರಿವರ್ತನೆಯಾದ ಸಮಾಜವನ್ನು ಸೂಕ್ಷ್ಮವಾಗಿ ಗಮನಿಸುತ್ತದೆ.

ಮಲಯಾಳಂ ಸಾಹಿತ್ಯದಲ್ಲಿ 19 ನೆಯ ಶತಮಾನವು ಅತ್ಯಂತ ಪರಿಣಾಮಕಾರಿ ಮತ್ತು ಪ್ರಭಾವಶಾಲೀ ಕಾಲಘಟ್ಟವೆಂದು ಪರಿಗಣಿಸಲ್ಲಟ್ಟಿದೆ. ಏಕೆಂದರೆ, ಈ ಯುಗದಲ್ಲಿ ಮನುಷ್ಯ-ಮನುಷ್ಯರ ನಡುವಿನ ಸಂಬಂದಗಳಲ್ಲಿ ಉಂಟಾದ ಅಸಮಾನತೆ, ವೈರುಧ್ಯತೆ, ಅಸೂಯೆಯ, ಸಾಮಾಜಿಕ ಸಂಘರ್ಷಗಳನ್ನು, ಗಮನಿಸಿದಾಗ ಮನುಷ್ಯಸ್ವಾರ್ಥಿಯೂ, ಲೋಭಿಯೂ, ಅಹಂಕಾರಿಯಾಗಿ ಮೆರೆಯುತ್ತಿದ್ದಾನೆ ಎಂದು ತಿಳಿದು ಬರುತ್ತದೆ. ಇದಕ್ಕೆ ಕಾರಣವೆಂದರೆ ಸಾಮಾಜಿಕ ಸಂಘರ್ಷಗಳು, ತಲ್ಲಣಗಳು, ಆತಂಕಗಳು, ಮಾನವೀಯತೆ ಎನ್ನುವುದು ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತಿರುವಂತಹ ಕಾಲಘಟ್ಟದಲ್ಲಿದ್ದೇವೆ. ವೈಕಂ ರವರ ಕತೆಗಳು ಈ ಮೇಲಿನ ಎಲ್ಲಾ ಸವಾಲುಗಳನ್ನು ಯಾವ ರೀತಿ ವಿಡಂಬಿಸುತ್ತದೆ? ಹಾಗೂ ಇಂದಿನ ಸಮಾಜಕ್ಕೆ ಎಷ್ಟು ಪ್ರಸ್ತುತವೆನಿಸುತ್ತದೆ ಎನ್ನುವಂತಹ ವಿಚಾರಗಳಿಗೆ ಸಂಬಂಧಿಸಿದಂತೆ ನನ್ನ ಅಧ್ಯಯನದಲ್ಲಿ ಸಂಶೋಧಿಸಿದ್ದೇನೆ.

ಸಾಹಿತ್ಯ ಎನ್ನುವುದು ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದುಕಿನ ಕೈಗನ್ನಡಿಯಿದ್ದಹಾಗೆ, ಮನುಷ್ಯ ತಾನು ಅನುಭವಿಸಿದ್ದನ್ನು ಅಭಿವ್ಯಕ್ತಿಗೊಳಿಸಬಲ್ಲನಾದರೆ, ಆ ಅನುಭವದ ಅಭಿವ್ಯಕ್ತಿಯ ಬರಹ ರೂಪವೇ ಸಾಹಿತ್ಯವೆನಿಸಿಕೊಳ್ಳುತ್ತದೆ. ಇದು ಬದುಕನ್ನು ಕಟ್ಟಿಕೊಳ್ಳಲು, ಬದುಕನ್ನು ಅರ್ಥೈಸಿಕೊಳ್ಳಲು ಸಾಹಿತ್ಯವು ಸಾಮಾಜಿಕ ರುವಾರಿಯಾಗಿ ಕಂಡುಬರುತ್ತದೆ.

ಮಲಯಾಳಂ ಸಾಹಿತ್ಯದಲ್ಲಿ 1935-1950 ರ ಕಾಲವನ್ನು ಸಣ್ಣಕಥೆಗಳು ಪ್ರಾರಂಭಗೊಳ್ಳುವ ಸುವರ್ಣಯುಗವೆಂದು ಕರೆಯುತ್ತಾರೆ. ಈ ಕಾಲಘಟ್ಟವು ಅತ್ಯಂತ ಪರಿಣಾಮಕಾರಿ ಮತ್ತು ಪ್ರಭಾವಶಾಲೀ ಎಂದು ಪರಿಗಣಿಸಲ್ಪಟ್ಟಿದೆ. ಏಕೆಂದರೆ ಈ ಯುಗದಲ್ಲಿ ಮನುಷ್ಯ – ಮನುಷ್ಯನ ನಡುವಿನ ಸಂಬಂಧಗಳಲ್ಲಿ ಉಂಟಾದ ವೈರುದ್ಯತೆ, ವೈಷಮ್ಯ, ದ್ವೇಷ, ಅಸೂಯೆಯ ಮನೋಭಾವಗಳನ್ನು ಗಮನಿಸಿದಾಗ ಮನುಷ್ಯನು ಸ್ವಾರ್ಥಿಯೂ, ಕ್ರೂರಿಯೂ, ಲೋಭಿಯಾಗಿ ಮೆರೆಯುತ್ತಿದ್ದಾನೆ ಎಂದು ತಿಳಿದು ಬರುತ್ತದೆ. ಇದಕ್ಕೆ ಕಾರಣವೇನೆಂದರೆ, ಮಾನವೀಯ ಮೌಲ್ಯವನ್ನು ಕಳೆದುಕೊಳ್ಳುತ್ತಿರುವುದು, ಸ್ವಾರ್ಥಮನೋಭಾವವನ್ನು ರೂಢಿಕೊಳ್ಳುತ್ತಿರುವುದು ಕಂಡುಬರುತ್ತದೆ. ಎನ್ನುವಂತಹ ಪ್ರಜ್ಞೆಯನ್ನು ವೈಕಂ ಮಹಮ್ಮದ್ ಬಷೀರ್ ರವರು ತಮ್ಮ ಕತೆಗಳಲ್ಲಿ ಹೇಳಿರುವ / ದೃಢ ನಿಲುವಿನಿಂದ ತಿಳಿದುಬರುತ್ತದೆ. *3

ಮಲಯಾಳಂ ಸಾಹಿತ್ಯಿಕ ಲೋಕದಲ್ಲಿನ ಸಾಮಾಜಿಕ ,ಧಾರ್ಮಿಕ ವಿಚಾರಗಳಿಗೆ

ಸಂಬಂಧಿಸಿದಂತೆ ವೈಕಂ ಕತೆಗಳಲ್ಲಿ ಕಾಣಬರುತ್ತದೆ. ಅನುವಾದಲೇಖನವನ್ನು ಓದಬೇಕೆಂಬ ಆಸಕ್ತಿಯನ್ನು ಮೂಡಿಸುವಲ್ಲಿ ವೈಕಂ ರವರ ಕತೆಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ.

ಮಾನವೀಯ ಸಂಬಂಧಗಳು ಇಂದಿನ ಯಾಂತ್ರಿಕ ಜಂಜಾಟದಲ್ಲಿ ನಶಿಸುತ್ತಿರುವುದು ಹಾಗೂ ಮಾನವನು ಮನುಷ್ಯತ್ತ್ವವನ್ನು ಕಳೆದುಕೊಂಡು ಮೃಗೀಯ ರೀತಿಯಲ್ಲಿ ವರ್ತಿಸುತ್ತಿರುವಂತಹ ಸ್ಥಿತಿಯಲ್ಲಿ ಇಂದು ಬದುಕು ನಡೆಸುತ್ತಿದ್ದಾನೆ. ಧಾರ್ಮಿಕವಾಗಿಯೂ ಕೂಡ ಅನೇಕರೀತಿಯ ಗೊಂದಲ, ಘರ್ಷಣೆಗಳಿಗೆ ಒಳಗಾಗಿ ತನ್ನ ತನವನ್ನು ಕಳೆದುಕೊಳ್ಳುವಂತಹ ಸ್ಥಿತಿಯನ್ನು ಗಮನಿಸಬಹುದಾಗಿದೆ. ಮನುಷ್ಯನ ಸ್ವಾರ್ಥಿಯಾಗುತ್ತಿರುವುದೂ ಕಂಡುಬರುತ್ತದೆ.

ರಾಷ್ಟ್ರೀಯತೆ, ರಾಷ್ಟ್ರಪ್ರಜ್ಞೆ ಕಲ್ಪನೆಯನ್ನು ಇಂದಿನ ಯುವಜನತೆ ಮರೆಯುತ್ತಿರುವ ಹಿನ್ನೆಲೆಯಲ್ಲಿ
ಹಾಗೂ ಅಲ್ಲಿನ ಬದುಕು, ಒಳಾಡಳಿತಗಳು ಹೇಗೆ ಮತ್ತೊಬ್ಬರ ಮೇಲೆ ಹೊರೆಯಾಗುತ್ತವೆ? ಎನ್ನುವಂತಹ ವಿಚಾರಗಳೂ ಸಹ ಸಾಮಾಜಿಕ ನೆಲೆಯಲ್ಲಿ ನನ್ನ ಅಧ್ಯಯನದಲ್ಲಿನ ಕತೆಗಳು ಮೂಡಿಬಂದಿವೆ.

ಶತಮಾನಗಳಿಂದ ಗಂಡು-ಹೆಣ್ಣು ಕೂಡಿ ಬದುಕಿದವು. ಆದರೆ ಅವರಿಬ್ಬರಿಗೂ ಪರಿಚಿತವಾದ ಒಂದು ಸಾಮಾನ್ಯ ಪ್ರಪಂಚವಿದ್ದಂತೆ. ಹೆಣ್ಣಿಗೆ ಅವಳದೇ ಆದ ಭೌತಿಕ, ಮಾನಸಿಕ, ಪ್ರಪಂಚ ಉಳಿಯಿತು. ಈ ಹಿನ್ನೆಲೆಯಲ್ಲಿ ಮಹಿಳೆಯರ ಸ್ಪಂದನೆಯ ಗ್ರಹಿಕೆಯ ಸ್ವೀಕಾರದ ಲಯ, ಗತಿ, ತೀವ್ರತೆಗಳು ಭಿನ್ನವಾದವು. ಈ ಭಿನ್ನತೆ ಬದುಕನ್ನು ನೊಡುವ ಅವಳ ದೃಷ್ಟಿಕೊನಕ್ಕೂ ಒಂದು ವಿಶಿಷ್ಟತೆಯನ್ನು ತಂದುಕೊಟ್ಟಿದೆ. *4 (ವಿಜಯಾದಬ್ಬೆ 1989 ಪುಟ 105 ಮಹಿಳಾ ಸಾಹಿತ್ಯ ಸಮಾಜ)

ನವೋದಯ ಸಾಹಿತ್ಯ ಕಾಲಘಟ್ಟದಲ್ಲಿ ಹುಟ್ಟಿರುವಂತಹ ವೈಕಂ ಮಹಮ್ಮದ್ ಬಷೀರ್‌ರವರು ತಮ್ಮ ಕತೆಗಳಲ್ಲಿ ದೇಶಪ್ರೇಮ, ರಾಷ್ಟ್ರೀಯತೆ, ಹೋರಾಟಗಳಲ್ಲಿ ಸ್ವತಹ ಭಾಗಿಯಾಗಿದ್ದು ಅವರ ಅನುಭವ ಮತ್ತು ವಿಚಾರಗಳನ್ನು ಕುರಿತು ಅವರ ಕತೆಗಳಲ್ಲಿ ಕಂಡುಬರುತ್ತದೆ.

ಈ ಕಾಲದವರ ನಿಲುವು ಬದುಕು ಸ್ವೀಕಾರ್ಹವಾದದ್ದು, ಬಾಳಿನ ಅರ್ಥಪೂರ್ಣತೆಯನ್ನು ಬಿಂಬಿಸುವ ಸನ್ನಿವೇಶಗಳೂ ಸಹ ಅವರ ಕತೆಗಳಲ್ಲಿ ಕಾಣಸಿಗುತ್ತವೆ. ಪ್ರಕೃತಿ ಪ್ರೇಮ ಮತ್ತು ಮನುಷ್ಯ ಸಂಬಂಧದ ಗಾಢತೆಯನ್ನು ಕತೆಗಳಲ್ಲಿ ಕಾಣಬಹುದಾಗಿದೆ. ಸಾಮಾನ್ಯ ಜನರ ಬದುಕು ಇವರ ಕತೆಯ ವಸ್ತುವಾಗಿದೆ. ಆದರ್ಶ ಜೀವನ, ಆಶಾವಾದಿತನವನ್ನು ಸಹ ಇವರ ಸಾಹಿತ್ಯ ಬರಹದಲ್ಲಿ ಕಾಣಿಸಿಕೊಳ್ಳುತ್ತವೆ.

ಇಂದಿನಸಾಮಾಜಿಕಸಂದರ್ಭದಲ್ಲಿಮನುಷ್ಯರು ಯಂತ್ರನಾಗರೀಕತೆಯಲ್ಲಿ ಕಳೆದುಹೋಗುತ್ತಿರುವ ತಮ್ಮ ಬದುಕನ್ನು ಮತ್ತೆ ಸೃಷ್ಟಿಸಿಕೊಳ್ಳುವ, ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಡಬೇಕಿದೆ.

ಆದ್ದರಿಂದ ಈ ಅಂಶಗಳನ್ನು ಪ್ರಧಾನವಾಗಿಟ್ಟುಕೊಂಡು ಸ್ವಾತಂತ್ರ್ಯ ಸಮಾನತೆ ಹಾಗೂ ಸಾಮಾಜಿಕ ಭದ್ರತೆಗಾಗಿ ರಚನೆಗೊಂಡ ಸಾಹಿತ್ಯದ ಅಧ್ಯಯನ ನನ್ನ ಮೂಲ ಉದ್ದೇಶವಾಗಿದೆ.

**ವ್ಯಾಪ್ತಿ:**

2006 ರಲ್ಲಿ ಪ್ರಕಟವಾಗಿರುವ ವೈಕಂ ಕತೆಗಳು ಹಾಗೂ ಇನ್ನು ಮುಂತಾದ ಮಲಯಾಳಂ ಕತೆಗಳ ಪರಿಶೀಲನೆಯನ್ನು ನಾನು ನನ್ನ ಎಂ.ಫಿಲ್. ಪ್ರಬಂಧದ

ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿದ್ದೇನೆ.ಶೈಕ್ಷಣಿಕವಾಗಿ ನೋಡಿದಾಗಲೂ ,ಈ ಕತೆಗಳ ಮೇಲೆ ಯಾವುದೇ ರೀತಿಯ ಸಂಶೋಧನೆ ಇದುವರೆಗೆ ನಡೆದಿರುವುದಿಲ್ಲ.

ಕತೆಗಳ ಸಾಮಾಜಿಕತೆ ಮತ್ತು ಸಂಘರ್ಷಗಳ ಅಧ್ಯಯನವನ್ನು ಅನುವಾದ ಕತೆಗಳ ಪರಿಶೀಲನೆಯನ್ನು ಗಮನದಲ್ಲಿಟ್ಟುಕೊಂಡು ನನ್ನ ಅಧ್ಯನದ ವಿಚಾರವನ್ನು ಸಂಶೋಧಿಸುತ್ತಿದ್ದೇನೆ. ಈ ಕತೆಗಳು ನೇರವಾಗಿ ಒಂದು ಪ್ರದೇಶದ ಜನಾಂಗದ ಜನರ, ಬದುಕಿನ ರೀತಿ,ರಿವಾಜುಗಳನ್ನು ಅಧ್ಯಯನ ಮಾಡುತ್ತದೆ. ಹಾಗೂ ಕತೆಯಲ್ಲಿ ಕಂಡುಬಂದಿರುವ ಸಾಮಾಜಿಕತೆ ಮತ್ತು ಸಂಘರ್ಷದ ಅಂಶಗಳನ್ನು ಕಂಡುಕೊಳ್ಳುವುದು. ಒಂದು ಕಾಲಘಟ್ಟದಲ್ಲಿ ರಚನೆಯಾದ ಕತೆಯ ಹಿನ್ನೆಲೆ ಮತ್ತು ಆ ಕಾಲಘಟ್ಟದ ಬೆಳವಣಿಗೆಗಳ ಆಧಾರದ ಮೇಲೆ ಅಧ್ಯಯನ ಮಾಡುವುದು. ಪ್ರಸ್ತುತ ಪ್ರಬಂಧ ಕತೆಯಲ್ಲಿ ಬಂದಿರುವ ಸಾಂಸ್ಕೃತಿಕ ಅಂಶಗಳನ್ನು ಕಂಡುಕೊಳ್ಳುವಲ್ಲಿ ಇತರ ಜ್ಞಾನ ಶಾಖೆಗಳ ನೆರವನ್ನು ಪಡೆಯುವುದು. ಅವುಗಳೆಂದರೆ: ಸಮಾಜಶಾಸ್ತ್ರೀಯ, ಭಾಷಾಅಧ್ಯಯನ, ಉದರವಾದಿ ಸ್ತ್ರೀವಾದ ,ಮಾರ್ಕ್ಸವಾದಿ ಸ್ತ್ರೀವಾದ, ಭಾವನೆ ಸ್ತ್ರೀವಾದಿ ಸಮರ್ಥನೆ, ಸಮಾಜವಾದಿ, ಸಾಂಸ್ಕೃತಿಕ ಸ್ತ್ರೀವಾದಿ, ಕಪ್ಪು ಸ್ತ್ರೀವಾದ, ಇತ್ಯಾದಿಗಳನ್ನು ಶೋಧಿಸುವುದು ಈ ಅಧ್ಯಯನದ ಉದೇಶವಾಗಿದೆ. ಭಾಗಶಃ ಈ ಅಧ್ಯಯನವು ಬಹುಶಿಸ್ತೀಯ ಅಧ್ಯಯನ ಮಾದರಿಗೆ ಅನುಗುಣವಾಗಿ ರಚನೆಯಾಗಿದೆ.

ಸೃಜನಶೀಲತೆಯು ಕಾರ್ಯೋನ್ಮುಖವಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಹಳೆಯ ವಿಚಾರಧಾರೆಗಳನ್ನು ಕೈಬಿಡದೆ, ಪರಿವರ್ತನೆಯೊಂದಿಗೆ ಅವುಗಳನ್ನು ಅಧ್ಯಯನದ ವ್ಯಾಪ್ತಿ, ವಿಸ್ತಾರ, ಹರವು ಎಲ್ಲಾ ವಲಯಗಳನ್ನು ಅದು ಪ್ರವೇಶಿಸಿದೆ ಎಂಬುದು ನಮ್ಮ ಅರಿವಿಗೆ ಬರುವ ಸಂಗತಿಯಾಗಿದೆ.

**ವೈಕಂ ಮಹಮ್ಮದ್ ಬಷೀರ್ ರವರ ಪ್ರಮುಖವಾದ 17 ಅನುವಾದಿತ ಕತೆಗಳಾದ–**

1.ಪ್ರೇಮ ಪತ್ರ ,2.ಹೂಬಾಳೆ. 3.ಯುದ್ದಮುಗಿವುದಾದರೆ, 4.ನೀಲಿ ಕಂದೀಲು, 5.ಒಂದು ಹಳೆಯ ಪ್ರೇಮ ಕತೆ, 6.ವಾರಸುದಾರರು, 7.ಲೋಕ ಪ್ರಸಿದ್ದ ಮೂಗು, 8.ಏಕಾಂತದ ತೀರ ,9.ಶಬ್ದಗಳು ,10.ಗೋಡೆಗಳು, 11.ಜೀವನದ ಕರಿನೆರಳು, 12.ಅನರ್ಘ್ಯ ನಿಮಿಷ, 13.ಸಂಜೆಯ ಪ್ರಾರ್ಥನೆ, 14.ಬಂಗಾರಿ, 15.ಐಷುಕುಟ್ಟಿ, 16.ಜನ್ಮದಿನ, 17.ಹೀಗೊಬ್ಬ ಮನುಷ್ಯ ಎಂಬ ಕತೆಗಳನ್ನು ನನ್ನ ಎಂ.ಫಿಲ್ ಅಧ್ಯಯನದ ವ್ಯಾಪ್ತಿಗೆ ಆಯ್ಕೆ ಮಾಡಿ ಅಳವಡಿಸಿಕೊಳ್ಳಲಾಗಿದೆ.

## ಅಧ್ಯಯನದ ಮಹತ್ವ

ಮಲೆಯಾಳಂನ ಗದ್ಯ ಪ್ರಕಾರವನ್ನು ಶ್ರೀಮಂತಗೊಳಿಸಿದ ಮೊದಲನೆಯ ಪೀಳಿಗೆಯಲ್ಲಿ ವೈಕಂ ಬಷೀರ್ ಬಹುಮುಖ್ಯ ಲೇಖಕರ ಪಟ್ಟಿಯಲ್ಲಿ ಕಂಡುಬರುತ್ತಾರೆ.

ಬಷೀರ್‌ರವರ ಕಥೆಗಳ ವಸ್ತು ವೈವಿದ್ಯತೆ ಮತ್ತು ಆಶಯಗಳು ಎಂಥವರನ್ನು ಚಕಿತಗೊಳಿಸಿಬಿಡುತ್ತವೆ. ಅವರು ಓದುಗರೊಡನೆ ಇರಿಸಿಕೊಳ್ಳುವ ಅಪರೂಪದ ಆಪ್ತತೆ ಅವರು ಎಲ್ಲೂ ಓದುಗರನ್ನೂ ಅನುಮಾನಿಸುವ ಗೊಂದಲಗೊಳಿಸುವ ಸುದ್ಧಿಗೆ ಹೋಗುವುದಿಲ್ಲ. *5

ಅವರು ಬಹಳಷ್ಟು ಕಥೆಗಳಲ್ಲಿ ವೈಯಕ್ತಿಕ ಸಂಗತಿಗಳು ಬಂದರೂ ಆ ವೈಯಕ್ತಿಕ ಅನುಭವನಗಳುಅಸಮಾನ್ಯವಾದವುಗಳಾದ್ದರಿಂದಅವುಗಳು ಕಥೆಯಶ್ರೀಮಂತಿಕೆಗೆ ಪೂರಕವಾಗುತ್ತದೆಯೇ ಹೊರತು, ಕಥೆಗಾರನ ಸ್ವರತಿ ಅಥವಾ ವೈಯಕ್ತಿಕ ಗೋಳಾಗಿ ಕಾಣುವುದಿಲ್ಲ ಅವರು ಈ ಲೌಕಿಕ ಪ್ರಪಂಚದ ಕಡು ವಾಸ್ತವ ಚಿತ್ರಗಳನ್ನು ಕೊಡತ್ತಲೇ, ಅತಿಮಾನುಷ ಲೋಕದ ರಹಸ್ಯಗಳಿಗೂ ಕರೆದೊಯ್ಯಬಲ್ಲರು

ಇವರ ಈ ಕಥೆಗಳ ಲೋಕದ ಹರವು ಹಲವು ಬಗೆಯದು ಇಲ್ಲ ನಿಷ್ಕಲ್ಮಷ ಪ್ರೀತಿಗಾಗಿ ಹಂಬಲಿಸುವ, ಜಾತಿ, ಧರ್ಮಗಳನ್ನು ಮೀರುವ ಮನಸುಗಳಿವೆ ಒಂದು ಕತೆಯನ್ನು ಹೊಸ ದೃಷ್ಟಿಕೋನದಿಂದ ನೋಡುವ ಮನಸ್ಥಿತಿ ಓದುಗರಲ್ಲಿ ಮೂಡಿಸುತ್ತದೆ.

ಸಾಹಿತ್ಯ ಕ್ಷೇತ್ರದಲ್ಲಿ ನಡೆದ ಅಧ್ಯಯನಗಳು ಕಾಲದಿಂದ ಕಾಲಕ್ಕೆ ಭಿನ್ನ ಸ್ವರೂಪ ಪಡೆದುಕೊಳ್ಳತ್ತವೆ. 19 ರಿಂದ 21 ನೇಶತಮಾನದಲ್ಲಿ ನಡೆದ,ನಡೆಯುತ್ತಿರುವ ,ಸಾಹಿತ್ಯ ಕುರಿತ ಪರಿಶೀಲನೆಗಳು ತನ್ನದೇ ಆದ ವೈಶಿಷ್ಟ್ಯವನ್ನು ಪಡೆದುಕೊಂಡಿದೆ.

ವೈಕಂರವರ ಕಥನ ಸಾಹಿತ್ಯದ ಅಧ್ಯಯನವು ಒಂದು ಸಮುದಾಯದ ರೊಡಿ-ಸಂಪ್ರದಾಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕ್ರತಿಕ ಜನಾಂಗಿಕ ಮತ್ತು ಭಾಷಿಕನೆಲೆ, ಮಹಿಳಾ ಸಂವೇದನೆಗಳು, ಕೌಟುಂಬಿಕ ಬಿಕ್ಕಟ್ಟುಗಳು,ಮಾನವೀಯ ಮೌಲ್ಯ, ಇತ್ಯಾದಿ ಅಂಶಗಳ ಮೂಲಕ ಕತೆಗಳ ಹಿನ್ನೆಲೆಯಲ್ಲಿ ನನ್ನ ಅಧ್ಯಯನದ ಪರಿಶೀಲನೆಯಾಗಿದೆ.

ಮನುಷ್ಯರ ಬದುಕನ್ನು ನೋಡುವ ನೋಟಕ್ಕೋಂದು ಹೊಸತನವನ್ನು ತಂದು, ಸಾಮಾಜಿಕ ಸ್ಥಿತಿಗತಿಗಳನ್ನು, ರೂಢಿಸಂಪ್ರದಾಯಗಳನ್ನು, ಸಂಸ್ಕೃತಮಯ ಸಂಪ್ರದಾಯವಾದಿಗಳ ಹಿಡಿತದಿಂದ ಸಾಮಾನ್ಯ ಬದುಕಿನತ್ತ ಎಳೆತಂದ ಬಷೀರರ ಬರಹಗಳು ನಮ್ಮ ಸಮಕಾಲೀನ ಭಾರತದ ಬದುಕಿಗೊಂದು ಕನ್ನಡಿಯಿದ್ದಂತೆ.

ಈ ಹಿನ್ನೆಲೆಯಲ್ಲಿ ಬಷೀರವರ ಬರಹಗಳು ನಮ್ಮ ಕನ್ನಡದಲ್ಲಿ ಬಲು ಮುಖ್ಯವಾಗುತ್ತವೆ. ಬಷೀರರಂಥ ಒಬ್ಬ ಹ್ಯೂಮನಿಸ್ಟ್ ಲೇಖಕನನ್ನು ಕೇವಲ ಕೇರಳದ ಸಾಮಾಜಿಕ ಚೌಕಟ್ಟಿನ ಹಿನ್ನೆಲೆಯಲ್ಲಿ

ಅಥವಾ ಯವುದೋ ಒಂದು ವರ್ಗದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವ ಮಿತಿಯನ್ನು ಸೃಷ್ಟಿಸಿಕೊಳ್ಳುವುದು ಮೂರ್ಖತನವಾಗುತ್ತದೆ.ಏಕೆಂದರೆ, ಯಾವುದೇ ಲೇಖಕನ ಎದೆಯಿಂದ ನೇರವಾಗಿ, ಮಾನವೀಯತೆಯ ಆಳದಿಂದ ಹೊರಹೊಮ್ಮುವ ಆಶಯಗಳು, ತುಡಿತಗಳು, ತಳಮಳಗಳು ಒಂದು ಜನಾಂಗಕ್ಕೆ ಅಥವಾ ಒಂದು ಪ್ರದೇಶಕ್ಕೆ ಸೀಮಿತವಾದವುಗಳಲ್ಲ. ಅವು ಈ ಎಲ್ಲಾ ಮಿತಿಗಳನ್ನು ಮೀರಿ ಸಾರ್ವತ್ರಿಕವಾಗಿಬಿಡುತ್ತವೆ.

ಬಷೀರವರ ಕೆಲವು ಕಥೆಗಳು ಸಿನಿಮಾಗಳಾಗಿವೆ. ದೆವ್ವ ಮತ್ತು ಜೀವಂತ ಪಾತ್ರಗಳು ಒಟ್ಟೊಟ್ಟಿಗೆ ಬದುಕುವ ಕಾವ್ಯಾತ್ಮಕ ಕಥೆಯಾದ "ನೀಲಿ ಕಂದೀಲು" ಭಾರ್ಗವಿ ನಿಲಯಂ ಎಂಬ ಹೆಸರಿನಲ್ಲಿ ಸಿನಿಮಾವಾಗಿ ಈಗಲೂ ಮಲೆಯಾಳಿಗಳ ಮನದಲ್ಲಿ ಉಳಿದಿದೆ. "ಪ್ರೇಮಪತ್ರ" ಕತೆ ಸಿನಿಮಾಗಲಾಗಿದ್ದರೂ, ಈವರೆಗೂ ತೆರೆಕಂಡಿಲ್ಲ. ಆದರೆ, ನಮ್ಮ ದೇಶದ ಪ್ರಜ್ಞಾವಂತ ನಿರ್ದೇಶಕರುಗಳಲ್ಲಿ ಒಬ್ಬರಾದ ಆಡೂರು ಗೋಪಾಲಕೃಷ್ಣನ್ ರವರ ನಿದೇಶನದಲ್ಲಿ ತೆರೆಕಂಡ ಗೋಡೆಗಳು 1989ರ ಅತ್ಯುತ್ತಮ ಚಿತ್ರವೆಂದು ರಾಷ್ಟ್ರಪತಿಗಳ ಪದಕವನ್ನು, 1990ರಲ್ಲಿ UNICEF, SIPRESCI ಪ್ರಶಸ್ತಿಯನ್ನು ಪಡೆದುಕೊಂಡಿತು. ನೀಲಿಕಂದೀಲು, ಚಿತ್ರಕ್ಕೆ ವೈಕಂ ರವರೇ ಸ್ವತಃ ಸಂಭಾಷಣೆಗಳನ್ನು ಬರೆದಿದ್ದಾರೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ವೈಕಂ ರವರ ಕತೆಗಳನ್ನು ಪರಿಶೀಲಿಸುವುದು ನನ್ನ ಅಧ್ಯಯನ ಕ್ರಮವಾಗಿದೆ. ಈ ಎಲ್ಲಾ ಅಂಶಗಳನ್ನು ಆಧಾರವಾಗಿಟ್ಟುಕೊಂಡು ವೈಕಂ ರವರ ಕತೆಗಳು ಎಷ್ಟು ಪ್ರಸ್ತುತ ಹಾಗೂ ವಾಸ್ತವತೆಗೆ ಹತ್ತಿರವಾದಂತಹವು ಎಂಬ ವಿಚಾರಗಳು ಈ ಅಧ್ಯಯನದಿಂದ ತಿಳಿದುಬರುತ್ತದೆ. ಈ ನೆಲೆಗಟ್ಟಿನಲಿ ವೈಕಂಮಹಮ್ಮದ್ ಬಷೀರ್ ರವರ ಕತೆಗಳಲ್ಲಿನ ಸಾಮಾಜಿಕತೆ ಮತ್ತು ಸಂಘರ್ಷ ಎನ್ನುವ ಶೀರ್ಷಿಕೆಯ ಮೂಲಕ ಈ ಕತೆಗಳಲ್ಲಿ ಅಡಗಿರುವಂತಹ, ಹಾಗೂ ಸ್ಥಬ್ಧವಾದಂತಹ ಪಾತ್ರಗಳು ಇವೆ ಎಂಬುದು ನನಗೆ ತಿಳಿದು ಬಂತು. ಆದ್ದರಿಂದ ಇವರ ಕತೆಗಳ ಬಗ್ಗೆ ನನಗೆ ಆಸಕ್ತಿಯಿಂದ ವಿವರಿಸುವ ಪ್ರಯತ್ನವನ್ನು ನನ್ನ ಅಧ್ಯಯನದಲ್ಲಿ ಪರಿಶೀಲಿಸಿದ್ದೇನೆ.

## ಕೃತಿಕಾರನ ಪರಿಚಯ: ವೈಕಂ ಮಹಮ್ಮದ್ ಬಷೀರ್:



"ವೈಕಂ ಮಹಮ್ಮದ್ ಬಷೀರ್" ಅವರು 1937 ರಿಂದ ಕಥೆಗಳನ್ನು ಬರೆಯಲು ತೊಡಗಿದ್ದರು ಇವರ ಕಥೆಗಳು ಹಸಿವೆ, ಬಡತನ, ನೋವುಗಳ ಮುದ್ರೆಗಳನ್ನು ಹೊತ್ತಿದ್ದವು.

ಬಷೀರ್ ರವರಿಗೆ ಕೇಂದ್ರ ಸಾಹಿತ್ಯ ಅಕಾಡಮಿ ಮತ್ತು ಕೇರಳ ಸಾಹಿತ್ಯ ಅಕಾಡಮಿಗಳು ಅನೇಕ ಪ್ರಶಸ್ತಿಗಳನ್ನು ಕೊಡುವುದರ ಮೂಲಕ ಗೌರವಿಸಲಾಗಿದೆ.1982 ರಲ್ಲಿ ಪದ್ಮಶೀ ಪ್ರಶಸ್ತಿ ಪಡೆದಿದ್ದಾರೆ. ಹೀಗೆ ಇನ್ನು ಅನೇಕ ಪ್ರಶಸ್ತಿಗಳು ಲಭಿಸಿವೆ.

ಇವರು ಸುಮಾರು 25 ಕತೆಗಳನ್ನು ಬರೆದಿದ್ದಾರೆ. ಹಾಗೂ ಕಾದಂಬರಿಗಳನ್ನು ಸಹ ಬರೆದಿದ್ದಾರೆ ಅವುಗಳೆಂದರೆ, ಬಾಲ್ಯ ಕಾಲ ಸಖಿ (1944), ಪಾತುಮ್ಮನ ಆಡು (1959) ನನ್ನಜ್ಜನಿಗೊಂದಾನೆ ಇತ್ತು ಇವು ಮುಖ್ಯವಾದುವು.

ಸಾಹಿತ್ಯ ಎಂಬುದು ಬದುಕಿನ ಕನ್ನಡಿ. ಒಬ್ಬ ಲೇಖಕ ಅಥವಾ ಲೇಖಕಿ ತನ್ನ ಸುತ್ತಲಿನ ಸಮಾಜವನ್ನು ಸೂಕ್ಷ್ಮವಾಗಿ ಗಮನಿಸುವುದರ ಜೊತೆಗೆ ತನ್ನ ಸುತ್ತಲಿನ ಸಮುದಾಯ, ಸಮಾಜ ಹಾಗೂ ಪರಿಸರದೊಂದಿಗೆ ತನ್ನನ್ನು ತೆರೆದುಕೊಂಡಿರುತ್ತಾನೆ. ಹೀಗಾಗಿ ಕೃತಿಯೊಂದಿಗೆ ಲೇಖಕರ ಸುತ್ತಲಿನ ಪರಿಸರವೂ ಮುಖ್ಯವಾಗುತ್ತದೆ. ಆದ್ದರಿಂದ ವೈಕಂ ಮಹಮ್ಮದ್ ಬಷೀರ್ ಅವರ ಜೀವನ ಹಾಗೂ ಅವರು ರಚಿಸಿದ ಕೃತಿಗಳ ಪರಿಚಯವನ್ನು ಈ ಅಧ್ಯಯನದಲ್ಲಿ ಮಾಡಲಾಗುತ್ತದೆ



ಅವರ ಸಾಹಿತ್ಯಕ್ಕೆ ಕೊಡಿಗೆಗೆ ತಮ್ಮನ್ನು ತಾವು ಅರ್ಪಿಸಿಕೊಂಡಂತಹ ವ್ಯಕ್ತಿಯಾಗಿ ಕಂಡುಬರುತಾರೆ. ಸಾಹಿತ್ಯ ರಚನೆಗೆ ಬದುಕು ಕಲಿಸಿರುವಂತ ಪಾಠವಾಗಿರಬಹುದು ಅಥವ ಜೀವನ ಕಲಿಸಿರುವ ಅನುಭವದ ಪಾಠವವಾಗಿರಬಹುದು ಈ ಎಲ್ಲಾ ವಿಚಾರಗಳಿಂದ ಪ್ರೇರಣೆ ಪಡೆದು ಸಾಧಿಸಿದ್ದಾರೆ.

***6 (ಸಿ.ಡಿ. ವೀಕ್ಷಣೆಯ ಮಾಹಿತಿ)**

**ಕೊನೆಟಿಪ್ಪಣಿ:**

*1. ಮಲೆಯಾಳಂ 'ಕತೆಗಳು ಪುಟ.ಸಂಖ್ಯೆ–179

*2. ವಸಾಹತುಶಾಹಿ ಮತ್ತು ಭಾಷಾಂತರ–ಪುಟ ಸಂಖ್ಯೆ–04

*3. ಭಾಷಾಂತರದ ಸಾಂಸ್ಕೃತಿಕ ನೆಲೆಗಳು ಪುಟ ಸಂಖ್ಯೆ–ಮುನ್ನುಡಿ.

*4 ಮಲೆಯಾಳಂ 'ಕತೆಗಳು ಪುಟ.ಸಂಖ್ಯೆ–180

*5. ವೈಕಂ ಕತೆಗಳು. ಬಶೀರ್ ಎಂಬ ಬದುಕು(ಮುನ್ನುಡಿ)

*6. ಮಹಿಳೆ ಸಾಹಿತ್ಯ ಸಮಾಜ (ವಿಜಯಾದಬ್ಬೆ 1989, ಪುಟ 105) ಜೀವನ್ಮುಖಿ ಪತ್ರಿಕೆಯ ಲೇಖನ ಜುಲೈ–01–2015 ಪ್ರಕಟಣೆ.

*7. ಸಿ ಡಿ ವೀಕ್ಷಣೆಯ ಮಾಹಿತಿ

## ಅಧ್ಯಾಯ:2

## ವೈಕಂ ಮಹಮ್ಮದ್ ಬಷೀರ್‌ರವರ ಕತೆಗಳಲ್ಲಿ ಸ್ತ್ರೀ ಸಂವೇದನೆಯ ನೆಲೆಗಳು .

ಬಷೀರ್‌ರವರು ಹಲವು ಕತೆಗಳನ್ನು ಬರೆದಿದ್ದರೂ ಅವುಗಳಲ್ಲಿ ನಾನು ಸುಮಾರು 17 ಕತೆಗಳನ್ನು ಆಯ್ದು ಕೊಂಡಿದೇನೆ ಈ ಕತೆಗೆಳಲ್ಲಿ ವ್ಯಕ್ತವಾಗುವಂತಹ ಸಾಮಾಜಿಕ ಜವಾಬ್ದಾರಿ ಮತ್ತು ಸಮಕಾಲೀನ ಚಿಂತನೆಗಳನ್ನು ಅಲ್ಲದೇ ಸ್ತ್ರೀ ಕಾಳಜಿಯನ್ನು ಗುರುತಿಸಲಾಗಿದೆ. ಇವರ ಕತೆಗಳಿಗೆ ಸಂಬಂಧಿಸಿದಂತೆ ಕೇರಳ ಸರ್ಕಾರ ಮತ್ತು ಸಮುದಾಯದ ಜನಜೀವನ, ಅಲ್ಲಿನ ವ್ಯವಸ್ಥೆಗಳು ಹಾಗೂ ಮಹಿಳಾ ಸ್ಥಾನಮಾನವನ್ನು ಸಹ ಕತೆಗಳಲ್ಲಿ ಬಿಂಬಿಸಿದ್ದಾರೆ.

" ಕೇರಳದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇತ್ತು ಈಗಲೂ ಇದೆ– ಇಂದಿನ ಸ್ತ್ರೀ ಶೋಷಣೆ, ಪುರುಷನಿಗೆ ಪ್ರಾಧಾನ್ಯತೆಯನ್ನು ಕೊಡುತ್ತಿರುವುದು ವ್ಯತಿರಿಕ್ತವಾಗಿ ಕಂಡುಬರುತ್ತದೆ. ಅಂದರೆ, "ಮಾತೃಪ್ರಾಧಾನ್ಯತೆಯಿಂದ ಪುರುಷ ಪ್ರಾಧಾನ್ಯತೆಯ ಕಡೆಗೆ ಸಮಾಜ ಬದಲಾಗಿರುವುದು ಕಂಡು ಬರುತ್ತದೆ. ಕಾಲಾಂತರದಲ್ಲಿ ಬದಲಾದ ಸಮಾಜ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಇವರ ಕತೆಗಳಲ್ಲಿ ಕಾಣುತ್ತೇವೆ.

ಪಿತೃ ಪ್ರಧಾನ ವ್ಯವಸ್ಥೆಯೊಳಗಿನ ಸಂಬಂಧಗಳು ವ್ಯಕ್ತಿಗಳ ಇಚ್ಛಾ ನಿಚ್ಚೆಗಳಿಂದಾಗಲಿ ಅಥವಾ ವ್ಯಕ್ತಿಗಳಾಗಿ ಸ್ತ್ರೀಯರಿಗೆ ಇಲ್ಲವೆ ಪುರುಷರಿಗೆ ಒಳ್ಳೆಯದಾಗಿ/ಕೆಟ್ಟದ್ದಾಗಿ ತೋರುತ್ತವೆ ಎಂಬುದರಿಂದ ಆಗಲಿ ನಿರ್ಧಾರಿತವಾಗುವಂಥದಲ್ಲ. ಆ ಸಂಬಂಧಗಳು ಸಮಾಜುದ ವಿವಿಧ ಸಂಸ್ಥೆಯೊಳಗೆ ಹಾಗೂ ಸಾಮಾಜಿಕ ಆಚರಣೆಗಳೊಳಗೆ ಮೈಗೂಡಿಕೊಂಡಿರುತ್ತವೆ. ಅಂದರೆ ಅವುಗಳು ಸಂರಚಿತ ಸಂಬಂಧಗಳು ಈ ಸಂಬಂಧಗಳು ಬಿಡಿ ವ್ಯಕ್ತಿಗಳು ಬಯಸುವಷ್ಟರಿಂದಲೇ ಇಲ್ಲವಾಗಲಾರವು. ಹಲವು ಸಂದರ್ಭಗಳಲ್ಲಿ ಬಿಡಿ ವ್ಯಕ್ತಿಗಳೂ ಇಂಥ ಶೋಕಾತ್ಮಕ ಸಂಬಂಧಗಳನ್ನು ಉಳಿಸಿಡುವ ಏಜೆಂಟರೇ ಆಗಿರುತ್ತದೆ

ಸ್ತ್ರೀವಾದ ಎಂದರೆ – ಸ್ತ್ರೀ ವಾದ ಎನ್ನುವ ಪದ 17ನೇ ಶತಮಾನದಲ್ಲಿ ಮೊದಲಬಾರಿಗೆ ಅಮೇರಿಕಾದ ಸಾಹಿತ್ಯವಲಯ ಚಳುವಳಿಯಲ್ಲಿ ಬಳಕೆಯಾಯಿತಷ್ಟೆ. 18ನೇ ಶತಮಾನದಲ್ಲಿ ಇಲ್ಲವೇ 20ನೇ ಶತಮಾನದಲ್ಲಿ ಬಳಕೆಯಾಗುವಾಗ ಆ ಪದದ ಅರ್ಥ ಹಾಗೂ ಕ್ರಿಯಾ ಸಾಧ್ಯತೆಗಳು ಭಿನ್ನವಾಗಿವೆ ಮತ್ತು ಅದರ ವ್ಯಾಪ್ತಿಯು ವಿಸ್ತಾರವಾಗುತ್ತಿದೆ. ಮೂಲಭೂತವಾಗಿ ಸಮಾಜದಲ್ಲಿನ ಸ್ತ್ರೀ

ಶೋಷಣೆ ಹಾಗೂ ದಮನವನ್ನು ಕುರಿತು ಪ್ರಜಾಪೂರ್ವಕ ಎಚ್ಚರ ಇದು ಬಹಳ ಮುಖ್ಯ ಅಲ್ಲದೆ ಸ್ತ್ರೀ ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವುದು ತನ್ನ ವ್ಯಕ್ತಿತ್ವವನ್ನು ಸ್ಥಾಪಿಸಿಕೊಳ್ಳುವುದು.

ಸ್ತ್ರೀವಾದಿ ಎಂದರೆ – ಲಿಂಗಾಧಾರಿತ ತಾರತಮ್ಯ ಮತ್ತು ಅದರ ಕ್ರೌರ್ಯವನ್ನು ಗುರುತಿಸಿ ಅದನ್ನು ನಿವಾರಿಸುವಲ್ಲಿ ಕಾರ್ಯತತ್ಪರವಾಗುವ ವ್ಯಕ್ತಿ ಎಂದರ್ಥ ಮತ್ತು ಸತತವಾಗಿ ಸ್ತ್ರೀ ಆಸ್ಮಿತೆಯನ್ನು ಕಂಡುಕೊಳ್ಳುತ್ತಾ ಸಾಗುವುದು.*1

**ಸ್ತ್ರೀಯಾತ್ಮಕತೆ:–** ಸ್ತ್ರೀ ಜೈವಿಕತೆಯನ್ನು ನಿರ್ಧಿಷ್ಟ ಸಾಮಾಜಿಕ ಚೌಕಟ್ಟಿಗೆ ಒಗ್ಗಿಸಿದಾಗ ಉಂಟಾಗುವ ಸ್ಥಿತಿಯಿದು, ಸಹಜ ಜೈವಿಕತೆಯು ಮತ್ತೊಂದೇನೋ ಆಗುವ ಪ್ರಕ್ರಿಯೆ ಇದು. ಹೆಣ್ಣಿನ ಮಾನಸಿಕತೆಯನ್ನು ತನಗೆ ಬೇಕಾದ ರೀತಿಯಲ್ಲಿ ಪರಿವರ್ತಿಸುವ ಮೂಲಕ ವ್ಯವಸ್ಥೆಯು ತನ್ನದೇ ನಿಯಂತ್ರಣ ವಿಧಿವಿಧಾನಗಳನ್ನು ಸೃಷ್ಟಿಸಿಕೊಂಡಿದೆ.

ಕೌಟುಂಬಿಕ ಸಂಬಂಧಗಳ ನೆಲೆಯಲ್ಲಿ ಸ್ತ್ರೀಯ ಪಾತ್ರವನ್ನು ಈಗಾಗಲೇ ಸ್ಥಿರೀಕರಿಸಲಾಗಿದ್ದು, ಅದಕ್ಕನುಗುಣವಾಗಿ ಅನುಸರಿಸುವ ಸ್ಥಿತಯನ್ನು ಮೌಲ್ಯವಾಗಿ ಪರಿಭಾವಿಸಲಾಗಿದೆ ಕನ್ಯತ್ವ, ಪಾತಿವ್ರತ್ಯ, ವಿಧೇಯತೆ ಪಾವಿತ್ಯತೆ, ಪತಿನಿಷ್ಠ, ಶೃಂಗಾರ, ತಾಯ್ತನ, ಪಾಲನೆ ಮುಂತಾದವು. ಇವುಗಳನ್ನು ಪ್ರಶ್ನಿಸಿ ಪರಿಶೀಲಿಸುವುದು ಸದಾ ಎಚ್ಚರವಾಗಿರುವ, ಎಚ್ಚರವಾಗಿರಿಸುವ ಒಂದು ನಿರಂತರ ಪ್ರಕ್ರಿಯೆಯಾಗಿದೆ ಸ್ತ್ರೀವಾದ. *2

## ಸ್ತ್ರೀವಾದವನ್ನು ಕುರಿತಂತೆ ವಿವಿಧ ವ್ಯಾಖ್ಯಾನಗಳು:–

### ಸಿಮನ್ ದಿ ಬೊವಾ

1949 ರಲ್ಲಿ ಸಿಮನ್ ದಿ ಬೊವಾಳ The Second Sex ಪ್ರಕಟವಾಯಿತು. ಮಹಿಳೆಯರ ಹಕ್ಕು ಭಾಧ್ಯತೆಗಳನ್ನು ಸಮರ್ಥಿಸುವ ಪ್ರಯತ್ನದಲ್ಲಿ ಆಕೆ ಮೊದಲಿಗಳು. ವ್ಯಾಪಕ ರಾಜಕೀಯ ಚಳುವಳಿಯ ಆಧಾರವಾಗಲಿ, ವಿಮರ್ಶಾತ್ಮಕ ಪ್ರೋತ್ಸಾಹವಾಗಲಿ ದಕ್ಕದ ಪ್ರತ್ಯೇಕ ಸ್ತ್ರೀವಾದಿಯಾಗಿ ಆಕೆ ನಿಲ್ಲುತ್ತಾಳೆ.

ಬೊವಾಳ ಪ್ರಕಾರ, ತನ್ನದೇ ಆದ ಕಲಾಜೀವನ ರೂಪಸಿಕೊಳ್ಳಲು ಮಹಿಳಗೆ ಭೌತಿಕ ಹಾಗೂ ಬೌದ್ಧಿಕ ಸಂಪನ್ಮೂಲಗಳ ಅಗತ್ಯವಿದೆ. ಆದರೆ ಪಿತೃ ಪ್ರಾಧಾನ್ಯವು ತನಗೆ ಅನಕೂಲಕರವಾದ ಸಾಮಾಜಿಕ, ಆರ್ಥಿಕ, ತಾತ್ವಿಕ ರಚನೆಗಳನ್ನು ಸ್ಥಾಪಿಸಿಕೊಂಡಿದ್ದು, ಮಹಿಳೆಗೆ ದಕ್ಕಬೇಕಾದ ಗಟ್ಟಿಯಾದ ಸಂಪನ್ಮೂಲಗಳು ಆಕೆಗೆ ಸಿಗದ ಹಾಗೆ ನೋಡಿಕೊಂಡಿದೆ. ಅವಳ ವಿಚಾರಗಳು ಗಟ್ಟಿಯಾದ ಸ್ತ್ರೀವಾದಿ

ನಂಬಿಕೆಯಾಗಿದ್ದು, ಮಹಿಳಾ ಚಳುವಳಿಗೆ ತನ್ನದೇ ಆದ ದೇಣಿಗೆಯನ್ನು ನೀಡಿದೆ. ಇಷ್ಟಾದರೂ ಬೊವಾಳ ಪಿತೃಪ್ರಧಾನ ನೆಲೆಯ ಕಲೆ ಹಾಗೂ ಕಲಾವಿದರ ವಿವರಣೆಯನ್ನು ನೀಡುತ್ತಾಳೆ. ಅವಳ ಪ್ರಕಾರ ದೊಡ್ಡ ಶ್ರೇಷ್ಠ ಕಲೆಗಾರರು ಯಾವಾಗಲೂ ವಿಶ್ವಾತ್ಮಕ ನೆಲೆಯ ಕಲೆಯ ಬಗೆಗಿನ ತಿಳುವಳಿಕೆಯುಳ್ಳವರು. ಮಹಿಳೆಯ ಸ್ವಾತಂತ್ರ್ಯದ ಸ್ಥಿತಿಯು ಕೂಡ ಇದೇ ರೀತಿಯದಾಗಿರಬೇಕಂಬ ಬೇಡಿಕೆಯನ್ನು ಬೊವಾಳು ಸಲ್ಲಿಸುತ್ತಾಳೆ. ವಿಶ್ವಾತ್ಮಕ ಪರಿಕಲ್ಪನೆಯು ಪುರಷನಂತೆ ತೊಡಗುವುದು ಮಾತ್ರವಲ್ಲ ಬದುಕು ಕೂಡ ಹಾಗೇ ಇರಬೇಕು ಎಂದು ಬೊವಾ ಹೇಳುತ್ತಾಳೆ.

ಆದರೆ, ನವ ಸ್ತ್ರೀವಾದೀ ಚಳುವಳಿಯ ಉದಯವು ಬೊವಾಳ ಚಿಂತನೆಗಳನ್ನು ವಿಮರ್ಶಾತ್ಮಕವಾಗಿ ನೋಡಿತು. ಸಾಮೂಹಿಕ, ರಾಜಕೀಯ ವ್ಯಾಪ್ತಿಯ ಮಹಿಳಾ ಪರಿಸರದಲ್ಲಿ ಮಹಿಳೆಯ ಸೃಜನಶೀಲತೆ ಚೆನ್ನಾಗಿ ನೆಲೆ ನಿಲ್ಲುತ್ತದೆಂಬುದನ್ನು ಆಕೆಗೆ ಮನವರಿಕೆ ಮಾಡಿಕೊಡಲೆತ್ನಿಸಲಾಯಿತು. ಬೊವಾ ಹೀಗಾಗಿ ಏಕಕಾಲಕ್ಕೆ ಸಮೂಹ ಚಳುವಳಿಯಿಂದ ಪಾಠ ಕಲಿಯಲೂ ಚಳುವಳಿಗೆ ತನ್ನ ಚಂತನೆಗಳನ್ನು ಧಾರೆ ಎರೆಯಲು ಸಾಧ್ಯವಾಯಿತು. ನವ ಫ್ರೇಂಚ್ ಸ್ತ್ರೀವಾದಿ ಚಳುವಳಿಯಲ್ಲಿನ ಆನ್‌ಟ್ರಿಸ್ಸನ್ ಹೇಳುವಂತೆ – ಬೊವಾಳ ವಿಚಾರಗಳನ್ನು ಕ್ರಿಯಾತ್ಮಕತೆಗೆ ಹೊರಳಿಸುವಲ್ಲಿ ಚಳುವಳಿಯ ಸಾರ್ಥಕತೆ ಪ್ರಕಟವಾಯಿತು. ಹೋರಾಟದ ಮೂಸೆಯಲ್ಲಿ ಸ್ಪುಟಗೊಂಡ ಸ್ತ್ರೀಪರ ಆಲೋಚನೆಗಳು. *3

**"ಬಾರ್ಬರಾ ಸ್ಮಿತ್‌ರ ಪ್ರಕಾರ** – ಸ್ತ್ರೀವಾದ ಒಂದು ರಾಜಕೀಯ ಸಿದ್ಧಾಂತವಾಗಿದ್ದು, ಎಲ್ಲಾ ಮಹಿಳೆಯರಿಗೆ ವಿಮೋಚನೆಯನ್ನು ತಂದು ಕೊಡುವ ಪ್ರಯತ್ನವಾಗಿದೆ. ಈ ಮಹಿಳೆ ಯಾವುದೇ ವರ್ಣದವರಾಗಿರಬಹುದು, ಉದ್ಯೋಗಿಗಳಾಗರಬಹುದು, ಬಡವರಾಗಿರಬಹುದು, ಅಂಗವಿಕಲೆಯರು, ವೃದ್ಧೆಯರು, ಆರ್ಥಿಕ ಸಬಲತೆಯನ್ನು ಪಡೆದುಕೊಂಡವರು ಯಾರೇ ಆಗಿರಬಹುದು. ಆಕೆಯ ಪ್ರಕಾರದಲ್ಲಿ ಸಮಾಜದಲ್ಲಿ ಇಂತಹ ಸಮಸ್ಯೆಗಳು ಯಾವಾಗ ಹುಟ್ಟುಕೊಳ್ಳುತ್ತದೆಯೋ ಆಗೆಲ್ಲ ಆ ಕ್ಷಣದ ತುರ್ತಿಗೂ– ಸ್ತ್ರೀವಾದ ಹುಟ್ಟಿಕೊಳ್ಳುತ್ತದೆ"

ಪುರುಷರು ಹೊಂದಿರುವಂತೆ ಸಾಮಾಜಿಕ, ಆರ್ಥಿಕ, ರಾಜಕೀಯ, ಹಕ್ಕಗಳನ್ನು ಹಾಗೂ ಅವಕಾಶಗಳನ್ನು ಮಹಿಳೆಯರು ಹೊಂದಬೇಕೆಂಬ ಸಿದ್ದಾಂತವಾಗಿ ಸ್ತ್ರೀವಾದವನ್ನು ರೆಬೆಕ್ಕಾಲಿವಿನ್ ಪ್ರತಿಪಾದಿಸುತ್ತಾಳೆ. ಆಕೆಯ ಪ್ರಕಾರ 'ಸ್ತ್ರೀವಾದ' ಇಂದಿಗೂ ಈ ಪ್ರಪಂಚದಲ್ಲಿ ಹೆಣ್ಣು ಪಡೆದುಕೊಂಡಿಲ್ಲದ ಸಾಮಾಜಿಕ ಸ್ಥಿತಿಯು ಮಾದರಿಯಾಗಿ ಪರಿಪೂರ್ಣತೆಯ ಆಕಾಂಕ್ಷೆಯಾಗಿದ್ದು, ಸದಾ ಆದರ್ಶವಾಗಿಯೇ ಇದೆ. ಸ್ತ್ರೀವಾದವನ್ನು ಒಂದು ಶಕ್ತಿಶಾಲಿಯಾದ ಹೋಮಿಯೋಪಥಿಕ್ ರೆಮಿಡಿಯಾದ ನೋಡುವಂತೆ ಪರಿಭಾವಿಸಲಾಗಿದೆ._***4**

ಕಪ್ಪು ಸ್ತ್ರೀವಾದದ ಹಿನ್ನೆಲೆಯಲ್ಲಿ :- 19ನೇ ಶತಮಾನದ ಅಂತರ ಜನಾಂಗ ಗುಲಾಮಗಿರಿ ವಿರೋಧ ಚಳುವಳಿಯಲ್ಲಿ ಅಮೇರಿಕಾದ ಮಹಿಳೆಯರೂ ಭಾಗವಹಿಸಿದರು. ನಾಗರೀಕ ಹಕ್ಕುಗಳ ಚಳುವಳಿಯ ಹೊತ್ತಿಗಾಗಲೇ ಅಮೇರಿಕೆಯ ಬಿಳಿಯರು ತಮ್ಮ ಹೋರಾಟವನ್ನು ಕಪ್ಪು ಜನರ ಜೀತಮುಕ್ತಿ ಹೋರಾಟದೊಂದಿಗೆ

ಸಮೀಕರಿಸಿಕೊಂಡಿದ್ದರು. ಕಪ್ಪು ಜನರ ಸಮಸ್ಯೆಗಳನ್ನು ಕುರಿತು ಅವರು ಆಸಕ್ತರಾಗಿದ್ದರು. ಇಷ್ಟಾದರೂ ಕಪ್ಪು ಜನ ಜನ ವರ್ಣಿಯರು ಎಂಬ ಪ್ರತ್ಯೇಕತಾಭಾವವನ್ನಿಟ್ಟುಕೊಂಡೇ ಚಳುವಳಿಯನ್ನು ಕುರಿತಾದ ತಿಳುವಳಿಕೆಯನ್ನು ಬಿಳಿಯರು ಹೊಂದಿದ್ದರು. ಸಾಂಸ್ಕೃತಿಕ, ದೈಹಿಕ, ಮಾನಸಿಕ ವ್ಯತ್ಯಾಸಗಳು ಕಪ್ಪು ಹಾಗೂ ಬಿಳಿ ಜನರಲ್ಲಿರುವುದು ಸಹಜವೆಂಬುದು ಅವರ ಧೋರಣೆ ಕಪ್ಪು ಜನಾಂಗವನ್ನು ಕುರಿತ ಹೀಯಾಳಿಕೆಯ ಮಾತುಗಳಾಡುವುದು ಕೀಳು ಅಭಿರುಚಿ ಎಂಬ ಸಭ್ಯ ಕಲ್ಪನೆಗಳು ಅಮೇರಿಕಾದಲ್ಲಿ ಪ್ರಚಲಿತವಾಗ ತೊಡಗಿದ್ದವು. *10

"ಬಂಗಾರಿ" ಎಂಬ ಕತೆಯು ಪ್ರಮುಖವಾಗಿ ಎರಡು ವಿಚಾರಗಳ ಬಗ್ಗೆ ಚರ್ಚಿಸುತ್ತದೆ. ಒಂದು ವರ್ಣ ವ್ಯವಸ್ಥೆಯನ್ನು ಕುರಿತು ಎರಡು -ಬಡವ ಶ್ರೀಮಂತರ ಶೋಷಣೆ ಎನ್ನುವಂತಹ ವಿಚಾರಗಳ ಬಗ್ಗೆ ಧ್ವನಿ ಎತ್ತುತ್ತದೆ. ಮನುಷ್ಯನು ನಾಗರೀಕತೆಗೆ ಒಳಗಾದಂತೆಲ್ಲಾ ಮಾನವೀಯ ನೆಲೆಯನ್ನು ಬಿಟ್ಟು ಕ್ರೂರತನದಿಂದ ವರ್ತಿಸುವಂತಹದನ್ನು ಕಾಣಬಹುದು.

ಈ ಕತೆಯಲ್ಲಿ ಕಂಡುಬರುವಂತಹ ಬಂಗಾರಿ ಎಂಬ ಹೆಣ್ಣು- ತಾನು ಕೆಳವರ್ಗದವಳೆಂದು, ಹಾಗೂ ಕಪ್ಪುವರ್ಣದಿಂದ ಸಮಾಜದಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿ ಬರುತ್ತದೆ. ಅವಮಾನಕ್ಕೆ ಒಳಗಾಗುತ್ತಾಳೆ ಕೆಲಸದಿಂದ ತೆಗೆದು ಹಾಕುತ್ತಾರೆ. ತನ್ನ ತಾಯಿಯನ್ನು ಕಳೆದುಕೊಂಡಂತಹ ದುಃಖ ಒಂಟಿ ಜೀವನ ಇವೆಲ್ಲವೂ ಆಕೆಗೆ ಧೈರ್ಯವನ್ನು ಕುಗ್ಗಿಸುತ್ತದೆ. ಆದರೂ ಸಹ ಆತ್ಮಸ್ಥೈರ್ಯ ಕಳೆದುಕೊಳ್ಳದೇ ಬದುಕನ್ನು ಧೈರ್ಯವಾಗಿ ಎದುರಿಸುತ್ತಾಳೆ.

ಈ ಕಥೆಯು "ಕಪ್ಪು ಸ್ತ್ರೀವಾದದ" ಹಿನ್ನೆಲೆಯಲ್ಲಿ ರಚನೆಗೊಂಡಿದೆ. 19ನೇ ಶತಮಾನದಲ್ಲಿ ದಕ್ಷಿಣ ಆಫ್ರಿಕಾದಲ್ಲಿದ್ದಂತಹ ಕಪ್ಪು ಜನರ ಗುಲಾಂಗಿರಿ ಜೀತಕ್ಕೆ ಬಳಸಿಕೊಳ್ಳುತ್ತಿದ್ದರು.ಇವರಲ್ಲಿ ಮಹಿಳಾ ಸ್ಥಿತಿ ಚಿಂತಾಜನಕವಾಗಿತ್ತು.ಅಮೆರಿಕೆಯ ಕಾರ್ಮಿಕ ವರ್ಗವು ಕಪ್ಪು ಜನರ ನಿಕಟವರ್ತಿಯಾಗಿತ್ತು. ಶೋಷಣೆಗೊಳಗಾದ ಗಂಡಸರ ಹೆಂಗಸರನ್ನು ಲೈಂಗಿಕವಾಗಿ ಉಪಯೋಗಿಸುವ ಹಕ್ಕನ್ನು ಬಿಳಿಯ ಜನರು ಪಡೆದಿದ್ದರು. ಹೀಗೆ ಅನೇಕ ನಿದರ್ಶನಗಳು ಈ ಕಪ್ಪು ಸ್ತ್ರೀವಾದಕ್ಕೆ ಸಂಬಂಧಿಸಿದಂತೆ ಕಂಡು ಬರುತ್ತವೆ. *11

'ಬಂಗಾರಿ' ಈ ಕತೆಯಲ್ಲಿ ಬರುವಂತಹ ಬಂಗಾರಿಯು ಅಶಿಕ್ಷಿತ ಮಹಿಳೆಯಾಗಿದ್ದಾಳೆ ಇವಳಲ್ಲಿರುವಂತಹ ಮಾನವೀಯತೆ, ಔದಾರ್ಯತೆಯ ಗುಣವನ್ನು,ಹೊಂದಿದವಳಾಗಿರುತ್ತಾಳೆ. ಸಮಾಜದಲ್ಲಿ ಪ್ರತಿಷ್ಠಿತ ಮನೆತನ ಎನಿಸಿಕೊಳ್ಳುವಂತ ಸಾಹುಕಾರನ ಮಗನಲ್ಲಿ ಎಲ್ಲಾ ತದ್ವಿರುದ್ಧದ ಗುಣಗಳನ್ನು ಕಾಣಬಹುದಾಗಿದೆ. ಇಲ್ಲಿ ಬಂಗಾರಿಯ ಬದುಕು ನತದೃಷ್ಟ ಬದುಕು ಅವಳಲ್ಲಿ , ಬದುಕುವ ತುಡಿತವಿದೆ. ಬಷೀರ್‌ರವರು ಈ ಲೌಕಿಕ ಪ್ರಪಂಚದ ಕಡು ವಾಸ್ತವ ಚಿತ್ರಗಳನ್ನು ಈ ಕತೆಯ ಮೂಲಕ ಪ್ರತಿಬಿಂಬಿಸಿದ್ದಾರೆ.

ಬಂಗಾರಿಯು ಎಲ್ಲಾ ಜನಗಳ ನಿಂದನೆ, ಅವಮಾನವನ್ನು ಸಹಿಸಿಕೊಂಡು– ಮತ್ತೊಬ್ಬ ನಿರಾಶ್ರಿತರ ವ್ಯಕ್ತಿಗೆ ಆಶ್ರಯವನ್ನು ಕೊಡುತ್ತಾಳೆ. ಇಂತಹ ಮನೋಧರ್ಮವು ಈ ಬಂಗಾರಿ ಎಂಬ ಪಾತ್ರದಲ್ಲಿ ಕಾಣಬರುತ್ತದೆ. ಹೆಣ್ಣು ಸರ್ವಶಕ್ತಿ ಎಂದು ಹೇಳುತ್ತಾರೆ. ಅದೇ ರೀತಿ ಈ ಕತೆಯಲ್ಲಿ ಬರುವಂತಹ ಬಂಗಾರಿಯೂ ಸಹ ಉತ್ತಮ ವ್ಯಕ್ತಿತ್ವ ಹೊಂದಿದ್ದಾಳೆ. 'ಬಂಗಾರಿ" ಎಂಬ ಹೆಸರು ಅವಳ ಗುಣ, ಸ್ವಭಾವಕ್ಕೆ ತಕ್ಕಂತೆ ಅಷೇ ಸ್ಪಷ್ಟತೆಯಲ್ಲಿ ಕತೆಯ ಶೀರ್ಷಿಕೆ ಮತ್ತು ಪಾತ್ರ ಎರಡರಲ್ಲಿಯೂ ಒಂದೇ ಹೆಸರನ್ನು ಕಾಣಬಹುದು.

ಸಾಮಾಜಿಕ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ವರ್ಗ, ವರ್ಣಗಳ ಹಿನ್ನೆಲೆಯಲ್ಲಿ ರಚನೆಯಾಗಿದೆ. ಬಂಗಾರಿ ಮತ್ತು ಭಿಕ್ಷುಕ (ಯುವವೀರ) ಶೋಷಿತ ವರ್ಗದ ಪ್ರತಿನಿಧಿಗಳು ಅವಳಲ್ಲಿ ಹೊಂದಾಣಿಕೆಯಿಂದ ಅಶಕ್ತ ಸಮಾಜವು ಶಕ್ತವಾಗುವ ಧ್ವನಿಯಲ್ಲಿ ಈ ಕತೆ ರಚನೆಯಾಗಿದೆ.

**ಮಾನವೀಯತೆ ಮತ್ತು ಅಮಾನವೀಯತೆ ನಡುವಿನ ಸಂಘರ್ಷ:–**

ಬಂಗಾರಿಯು ಯುವವೀರನ ಸ್ಥಿತಿಯನ್ನು ಕಂಡು ಮರುಕ ವ್ಯಕ್ತ ಪಡಿಸುವುದು. ಅದೇ ಸಮಯಕ್ಕೆ ಸಾಹುಕಾರನ ಮಗ ಇವಳ ಕಪ್ಪು ಬಣ್ಣವನ್ನು ಕಂಡು ಹೆದರಿ ಇವಳನ್ನು ಕೆಲಸದಿಂದಲೇ ಕಳುಹಿಸುತ್ತಾರೆ. ಮನುಷ್ಯ ಧರ್ಮೀಯ ನೆಲೆಯಲ್ಲಿ ಮತ್ತೊಬ್ಬರನ್ನು ಕಾಣಬೇಕೆಂಬ ಮನಸ್ಥಿತಿ ಕತೆಯಲ್ಲಿ ಕಂಡುಬರುತ್ತದೆ.ಇವಳ ವ್ಯಕ್ತಿತ್ವದಲ್ಲಿ ವೈಚಾರಿಕ ದೃಷ್ಟಿಯಿರುವುದನ್ನು ಕಾಣಬಹುದು. ಬದುಕಿಗೆ ಬೇಕಾಗಿರುವುದು ಬಣ್ಣವಲ್ಲ, ಬದುಕುವಂತಹ ಮಾನವೀಯತೆ, ಕಲೆ,ನಂಬಿಕೆ ,ಗುಣ ಸ್ವಭಾವಗಳು ಇರುವುದು ಮುಖ್ಯವಾದದ್ದು ಎನ್ನುವಂತಹ ನಿಲುವನ್ನು ಕಾಣಬಹುದು. ಈ ಕತೆಯು ಎಲ್ಲಾ ಕಾಲಗಳಿಗೂ ಅನ್ವಯವಾಗುವಂತಹದ್ದು, ಜೀವನದಲ್ಲಿ ಬಣ್ಣ, ರೂಪ, ಸೌಂದರ್ಯಗಳಿಗೆ ಮಹತ್ವಕೊಡುವುದನ್ನು ಬಿಟ್ಟು ಮಾನವೀಯ ನೆಲೆ ಅದೇ ಸರ್ವಹಿತವಾದದ್ದು.

ಇಂದಿನ ಜನ ಸಮೂಹದಲ್ಲಿರುವಂತಹ ಕಲ್ಪನೆಯ ಬಗ್ಗೆ ಹೇಳುವುದಾದರೆ ಕಪ್ಪು ಬಣ್ಣವನ್ನು ನಿರ್ಲಕ್ಷಿಸುವುದು, ಬಿಳಿಯ ಬಣ್ಣ/ವರ್ಣ ಶ್ರೇಷ್ಠ ಎನ್ನುವ ಭಾವನೆಯನ್ನು ಬಿಟ್ಟು ಚರ್ಮದ ಬಣ್ಣಕ್ಕೆ ಮಹತ್ವಕೊಡದೆ, ಉತ್ತಮ ಗುಣ ಸ್ವಭಾವ ಮನುಷ್ಯತ್ವಗುಣವನ್ನು ಹೊಂದಿರಬೇಕೆಂಬ ವಿಚಾರ ಈ ಕತೆಯಿಂದ ತಿಳಿದು ಬರುತ್ತೆ.

"ಐಷುಕುಟ್ಟಿ" ಎನ್ನುವ ಕಥೆಯಲ್ಲಿ ಅಸಹಾಯಕ ಹೆಣ್ಣೊಬ್ಬಳು ತನ್ನ ಬೇಡಿಕೆಯನ್ನು ಪ್ರತಿಷ್ಠೆಗೋಸ್ಕರ ಪಟ್ಟ ಹಟ ಹಿಡಿಯುವಂತಹ ಪ್ರಯತ್ನ ಹೋರಾಟ ಪ್ರತಿಭಟನೆಯು ಈ ಕಥೆಯಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಈ ಕಥೆಯು ಮುಸ್ಲಿಂ ಸಮುದಾಯದ ಹೆಣ್ಣಿನ ಅಸಹಾಯಕತೆಯನ್ನು ಚಿತ್ರಿಸುತ್ತದೆ. ಬೇಡಿಕೆಗಳು ಈಡೇರಬೇಕಾದರೆ ಪ್ರತಿಭಟಿಸುವಂತಹ ಮನಸ್ಥಿತಿಯನ್ನು ಮಹಿಳೆ ಕಂಡುಕೊಂಡಿದ್ದಾಳೆ. ಪುರುಷ ಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುವ ಮನೋಭಾವವನ್ನು ಈ ಕತೆಯಲ್ಲಿ ಕಾಣಬಹುದು.

ಮುಸ್ಲಿಂ ಸಮುದಾಯದಲ್ಲಿ ಹೆಣ್ಣಿನ ಬೇಡಿಕೆಗೆ ಯಾವ ರೀತಿಯ ಮನ್ನಣೆ ಕೊಡುತ್ತಿರಲಿಲ್ಲ. ಐಷುಕುಟ್ಟಿಯ ಗಂಡ ಹಾಗೂ ಗಂಡನ ಮನೆಯವರು ಆಕೆಯ ಹೆರಿಗೆಯ ಬಗ್ಗೆ ತೋರುವಂತಹ ನಿರ್ಲಕ್ಷ ಮನೋಭಾವವೇ ಇದಕ್ಕೆ ಕಾರಣವಾಗುತ್ತದೆ. ಹೆಣ್ಣೊಬ್ಬಳ ಅಸಹಾಯಕ ನೋವಿನ ಭಾವ ಈ ಕತೆಯಲ್ಲಿದೆ. ಅತ್ತೆ ಗಂಡನ ಧೋರಣಾ ಮನೋಭಾವ, ಪ್ರತಿಷ್ಠೆಗಾಗಿ ಆಸ್ಪತ್ರೆಯ ನೆಪ ಹೇಳುವ ಅಭಿಪ್ರಾಯವನ್ನು ಒಳ ಮನಸ್ಸಿನಲ್ಲಿದೆ ಎಂಬುದು ಗುರುತಿಸಿದೆ.

ಈ ಕಥೆಯಲ್ಲಿ ಮತಾಂತರದ ಸಮಸ್ಯೆ, ವರದಕ್ಷಿಣೆ ಸಮಸ್ಯೆ, ಮತ್ತು ಐಷುಕುಟ್ಟಿಯ ಹೆರಿಗೆಗೆ ವೈದ್ಯರನ್ನು ಕರೆಸಬೇಕೆನ್ನುವ ಬೇಡಿಕೆ ವೈದ್ಯರನ್ನು ಕರೆಸಲು ಆರ್ಥಿಕ ಪರಿಸ್ಥಿತಿ, ಅಭದ್ರತೆ . ಅವಳ ಸಮಸ್ಯೆಗಳನ್ನು ಅನೇಕ ಆಯಾಮದಲ್ಲಿ ಈ ಕತೆ ಒಳಗೊಂಡಿದೆ.

ಸಾಂಸ್ಕೃತಿಕ ಸ್ತ್ರೀವಾದವನ್ನು ಹೋಲುತ್ತದೆ- ಜೈವಿಕ ಭಿನ್ನತೆಗಳಿರುವುದರಿಂದ ಸ್ತ್ರೀ-ಪುರುಷರ ನಡುವೆ ಗುಣಗಳಲ್ಲಿ ವ್ಯತ್ಯಾಸವಿದೆ. ಇದು ಅತ್ಯಂತ ಸಹಜವಾದದ್ದು. ಇದನ್ನೇ ಮುಂದು ಮಾಡಿಕೊಂಡು ಶ್ರೇಷ್ಠ ಕನಿಷ್ಠತ್ವದ ಅಸಮಾನತೆಗಳನ್ನು ಹುಟ್ಟುಹಾಕಲು ಹೊಂಚು ಹಾಕಿದಾಗ ತೀವ್ರಗಾಮಿ ಸ್ತ್ರೀವಾದಿಗಳು ವಿರೋಧಿಸಿದರು. ಜ್ಞಾನ, ಬುದ್ಧಿವಂತಿಕೆಯ ಇತಿಹಾಸದಲ್ಲಿ ಪುರುಷನಿಗೆ ಧನಾತ್ಮಕ ಗುಣಗಳನ್ನು ಆರೋಪಿಸಿ, ಹೆಣ್ಣಿನ ಫಲವಂತಿಕೆ , ಗರ್ಭಧಾರಣೆಯನ್ನೇ ಪ್ರಮುಖ ವಿಷಯವಾಗಿಟ್ಟುಕೊಂಡು ಅವಳ ತಾಯ್ತನವನ್ನು ವೈಭವೀಕರಿಸುತ್ತಾ ಅವಳ ತಾಳ್ಮೆ, ಭರಣ, ಧಾರಣ ಶಕ್ತಿಗಳನ್ನು ಕೊಂಡಾಡುತ್ತಾ ಅವಳನ್ನು ಭಾವುಕ ನೆಲೆಯಲ್ಲಿ ಗುರುತಿಸಿ ಪುರುಷನ ದೈಹಿಕ ಶಕ್ತಿ, ಸಾಹಸ

ವಿಚಾರವಂತಿಕೆ ತೀರ್ಮಾನ ಗುಣಗಳನ್ನು ಬಹಳ ಮಹತ್ವವೆಂದು ಭಾವಿಸಿ ಅವನನ್ನು ಭೌದ್ಧಿಕ ನೆಲೆಯಲ್ಲಿ ಗುರುತಿಸುತ್ತಿರುವ ಪರಂಪರೆಯ ವಿರುದ್ಧ ಸಾಂಸ್ಕೃತಿಕ ಸ್ತ್ರೀವಾದಿಗಳು ಉರಿದು ಬೀಳುತ್ತಾರೆ. ಹೆಣ್ಣು ತನ್ನ ಅಂತಃ ಸತ್ವವನ್ನು ಉಳಿಸಿಕೊಳ್ಳಲು ಪುರುಷತ್ವ ಪ್ರತಿಪಾದಿಸುವ ಹೆಣ್ಣಿನಿಂದ ನಿರೀಕ್ಷಿಸುವ ಗುಣ ಮೌಲ್ಯಗಳಿಂದ ತನ್ನನ್ನು ತಾನು ಬಿಡುಗಡೆಗೊಳಿಸಿಕೊಂಡು ನೈಸರ್ಗಿಕವಾಗಿ ಅವಳ ದೌರ್ಬಲ್ಯಗಳು ಎಂದು ಭಾವಿಸಲ್ಪಟ್ಟಿರುವ ಗುಣ ಲಕ್ಷಣಗಳೇ ಹೆಣ್ಣಿನ ವಿಶಿಷ್ಟತೆಯ ಸಂಕೇತಗಳು ಸಂಪನ್ಮೂಲಗಳು ಎಂದು ಸಾಂಸ್ಕೃತಿಕ ಸ್ತ್ರೀವಾದಿಗಳು ನಂಬುತ್ತಾರೆ. *12

ಈ ಕಥೆಯಲ್ಲಿ ಅಸ್ಯಮ್ಮ ಎನ್ನುವವಳಿಗೆ ಮತಾಂತರ ಹೊಂದಿದವಳು ಎಂದು ಆರೋಪಿಸುವಂತಹ ಸ್ಥಿತಿಯನ್ನು ಕಾಣಬಹುದು ಅವಳು ಆ ಅವಮಾನವನ್ನು ಸಹಿಸಿಕೊಂಡು ಎಲ್ಲರ ಮುಂದೆ ನಗುಮೊಗದಂತೆ ವರ್ತಿಸುತ್ತಿದ್ದಳು. ಅವಳ ವೇದನೆ, ಸಂಕಟ, ನೋವನ್ನು ಕೇಳುವಂತವರು ಯಾರೂ ಇರಲಿಲ್ಲ. ತಾನು ಮತಾಂತರ ಹೊಂದಿದಕ್ಕೆ ಇಡೀ ಸಮಾಜ ಮತ್ತು ಕುಟುಂಬದ ಬಂದುಗಳು ಅವಳನ್ನು ಚುಚ್ಚು ಮಾತಿನಿಂದ ಹೀಯಾಳಿಸುವಂತಹ ನೋವನ್ನು ಈಕೆ ಸಹಿಸಿಕೊಳ್ಳಬೇಕಾಯಿತು.

ಪ್ರಶ್ನಿಸುವ , ಪ್ರತಿಭಟಿಸುವ ಮನೋಧರ್ಮ ಇವಳಲ್ಲಲಿ ಇರಲಿಲ್ಲ ಆದರೆ ಇದಕ್ಕೆ ವಿರುದ್ಧವಾಗಿ ಐಷುಕುಟ್ಟಿಯು ಭಿನ್ನವಾಗಿ ಕಾಣುತ್ತಾಳೆ. ಪ್ರಶ್ನಿಸುವ , ಪ್ರತಿಭಟಿಸುವ ವಿರೋದಿಸುವ ಮನಸ್ಥಿತಿಯ ಸ್ಥೈರ್ಯ ಇವಳ ಪಾತ್ರದಲ್ಲಿ ಕಾಣಬಹುದು.

ತಾಳಿಯನ್ನು ಮಾರಿಯಾದರೂ ಮಗಳನ್ನು ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸುವುದಾಗಿ ಹಾಗೂ ಐಷುಳ ಪತಿಗೆ ತಲಾಕ್ ನೀಡುವುದಾಗಿಯೂ ಮಾತನಾಡುತ್ತಾಳೆ. ಈ ವಿಚಾರವು ಕೇರಳದಲ್ಲಿ ಮಹಿಳಾ ಪ್ರಾಧಾನ್ಯತೆ ಇದ್ದುದ್ದು ತಿಳಿದು ಬರುತ್ತದೆ. ಮಾತೃ ಪ್ರಾಧಾನ್ಯ ಕುಟುಂಬದ ವ್ಯವಸ್ಥೆಯ ರೀತಿ ಕಂಡುಬರುತ್ತದೆ. ಇದು ಅಂದಿನ ಕಾಲದ ಮಹಿಳೆಯ ಪ್ರಾಧಾನ್ಯತೆಯ ಬಗ್ಗೆ ಒಂದು ಸ್ಪಷ್ಟ ಚಿತ್ರಣವಾಗಿ ಕಂಡು ಬರುತ್ತದೆ.

ತನ್ನ ಅಳಿಯನಿಗೆ ಯಾವುದೇ ರೀತಿಯ ಅಂಜಿಕೆ, ಅಳುಕಿಲ್ಲದೆ ಪ್ರಶ್ನಿಸುವಿಕೆ, ಹಾಗೂ ತಲಾಕ್ ನೀಡುವುದಾಗಿ ಎಚ್ಚರಿಕೆಯನ್ನು ಸಹ ನೀಡುತ್ತಾಳೆ. ಅಳಿಯನಿಗೆ ಈಗಾಗಲೇ ವರದಕ್ಷಿಣೆ ಹಣ ಪಡೆದು ಅದೂ ಸಹ ಖರ್ಚಾಗಿ ಹೋಗಿದೆ. ತಾಳಿಯನ್ನು ಮಾರಿ ಮಗಳನ್ನು ಹೆರಿಗೆ ಮಾಡಿಸುತ್ತೇನೆ ಎಂದು ಹೇಳುವಂತಹ ತಾಯಿಯನ್ನು ಈ ಕಥೆಯಲ್ಲಿ ಸೊಗಸಾಗಿ ಬಿಂಬಿಸಿದ್ದಾರೆ. ತಾಯಿಯ ಪ್ರೀತಿ ವಾತ್ಸಲ್ಯವು ಈ ಕಥೆಯ ಮೂಲಕ ಬಿಂಬಿತವಾಗಿದೆ.

"ಪ್ರೇಮಪತ್ರ" ಎಂಬ ಕಥೆಯಲ್ಲಿ ಮಾರ್ಕ್ಸ್‌ವಾದಿ ಸ್ತ್ರೀವಾದ ದ ಹಿನ್ನೆಲೆಯಲ್ಲಿ ಈ ಕತೆ ರಚನೆಯಾಗಿದೆ. ಕುಟುಂಬದೊಳಗಿನ ಮಹಿಳೆಯ ಆರ್ಥಿಕ, ಭೌತಿಕ, ಶೋಷಣೆಯನ್ನೇ ವರ್ಗ

ಸಮಾಜಕ್ಕೂ ವಿಸ್ತರಿಸಿ ತಮ್ಮ ಸಾಮಾಜಿಕ ಚಿಂತನೆಗಳನ್ನು ಮಾರ್ಕ್ಸ್ ಮತ್ತು ಏಂಗಲ್ಸ್ ರೂಪಿಸಿಕೊಂಡರು. ಲಿಂಗಾಧಾರಿತ ಶ್ರಮ ವಿಭಜನೆಯ ಸಿದ್ಧಾಂತವನ್ನಾಧರಿಸಿ ಸ್ತ್ರೀ ಪುರುಷರೊಳಗಿನ ಸಾಮಾಜಿಕ ಅಸಮಾನತೆಯ ಸ್ವರೂಪವನ್ನು ಪ್ರಧಾನವಾಗಿ ಮಾರ್ಕ್ಸ್‌ವಾದಿ ಸ್ತ್ರೀವಾದಿ ವಿಶ್ಲೇಷಿಸುತ್ತದೆ.

**ಮಾರ್ಕ್ಸವಾದದ ಹಿನ್ನೆಲೆ:** ಕುಟುಂಬದೊಳಗಿನ ಮಹಿಳೆ ಆರ್ಥಿಕ, ಭೌತಿಕ ಶೋಷಣೆಯನ್ನು ವರ್ಗ ಸಮಾಜಕ್ಕೂ ವಿಸ್ತರಿಸಿ ತಮ್ಮ ಸಾಮಾಜಿಕ ಚಿಂತನೆಗಳನ್ನು ಮಾರ್ಕ್ಸ್ ಮತ್ತು ಏಂಗಲ್ಸ್ ರೂಪಿಸಿಕೊಂಡರು. ಸಾಮಾಜಿಕ ವ್ಯವಸ್ಥೆಯ ಸಮಗ್ರ ಪರಿವರ್ತನೆಯ ಮೂಲಕ ಮಾತ್ರ ಸರ್ವಸಮಾನತೆಯನ್ನು ಆಧರಿಸಿದ ಸಮಾಜವನ್ನಾಧರಿಸಿದ ಸಮಾಜವನ್ನು ಕಟ್ಟಲು ಸಾಧ್ಯವೆಂದು ಇವರಿಬ್ಬರೂ ನಂಬಿದ್ದರು. ಲಿಂಗಾಧಾರಿತ ಶ್ರಮ ವಿಭಜನೆಯ ಸಿದ್ಧಾಂತವನ್ನಾಧರಿಸಿ ಸ್ತ್ರೀ ಪುರುಷರೊಳಗಿನ ಸಾಮಾಜಿಕ ಅಸಮಾನತೆಯ ಸ್ವರೂಪವನ್ನು ಪ್ರಧಾನವಾಗಿ ಮಾರ್ಕ್ಸ್‌ವಾದಿ ಸ್ತ್ರೀವಾದಿ ವಿಶ್ಲೇಷಿಸುತ್ತದೆ. *6

ಸಾರ್ವಜನಿಕ ಉತ್ಪಾದನೆಯಲ್ಲಿ ಹೆಣ್ಣು ಭಾಗವಹಿಸದಂತೆ ಮಾಡುವ ನಾಗರಿಕ ಕುಟುಂಬ ಪದ್ಧತಿಯಲ್ಲಿನ ಹೆಣ್ಣಿನ ಶೊಷಣೆಯ ಸ್ವರೂಪದ ಆಧಾರದ ಮೇಲೆಯೇ ವರ್ಗ ಶೋಷಣೆಯ ಸ್ವರೂಪವನ್ನು ಮಾರ್ಕ್ಸ್ ಮತ್ತು ಏಂಜಲ್ಸ್ ನಿರ್ಧರಿಸುತ್ತಾರೆ . ಆದರೆ ಮಹಿಳೆಯರ ಗೃಹಕೃತ್ಯವೂ ಸೇರಿದಂತೆ ಅಪಾರವಾದ ಕಾರ್ಯ ಚಟುವಟಿಕೆಗಳನ್ನು ಮಾರ್ಕ್ಸ್ ಏಂಜಲ್ಸ್ ಪರಿಗಣಿಸುವುದೇ ಇಲ್ಲವೆನ್ನುತ್ತಾರೆ. ಸ್ತ್ರೀವಾದಿಗಳು ಮಕ್ಕಳ ಪಾಲನೆ ಪೋಷಣೆ ಆಹಾರ ಸಿದ್ಧಪಡಿಸುವಿಕೆ, ಸಂತಾನೋತ್ಪತ್ತಿ, ಮನೆಗೆಲಸ ಇವುಗಳಿಗೆ ದುಡಿಮೆಯ ಬೆಲೆಯಾಗಲಿ ಮಗು ತಾಯಿ ಮೌಲ್ಯವಾಗಲಿ ಇಲ್ಲದಿರುವುದನ್ನು ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಗಮನಿಸಿದರು ಮನೆಯ ಒಳಗಿನ ದುಡಿಮೆ ಹಾಗೂ ಜವಾಬ್ದಾರಿಗಳು ಮಹಿಳೆಯರು ಸಾರ್ವಜನಿಕ ಉತ್ಪಾದನೆಯಲ್ಲಿ ಭಾಗವಹಿಸದಂತೆ ಮಾಡುತ್ತವೆ.

**ಭಾವನೆ– ಸ್ತ್ರೀವಾದಿಗಳ ಸಮರ್ಥನೆ:–**

ಪ್ರಕೃತಿ, ದೇಹ, ಭಾವನೆ, ಸಂವೇದನೆಗಳು, ವೈಚಾರಿಕತೆ, ಮನಸ್ಸು ಹಾಗೂ ಸ್ವಾತಂತ್ರ್ಯಕ್ಕೆ ವಿರುದ್ಧವಾದವು ಎಂಬ ಭ್ರಮೆಯನ್ನು ಸ್ತ್ರೀವಾದಿ ಬರಹಗಳು ಪ್ರಶ್ನಿಸುತ್ತವೆ. ಆ ಊಹೆಗೆ ಸವಾಲೊಡ್ಡುತ್ತದೆ. ಸ್ತ್ರೀವಾದವು ಏಕಕಾಲದಲ್ಲಿ ರಚನೆಯಲ್ಲಿ ಸ್ತ್ರೀವಾದಿಗಳೆಲ್ಲರೂ ಏಕಾಭಿಪ್ರಾಯವುಳ್ಳವರು ಅಲ್ಲ. ಭಾವನೆ ಹಾಗೂ ಸಾಂಕೇತಿಕತೆಯ ಬಗೆಗೆ ಸ್ತ್ರೀವಾದಿ ಬರಹಗಳು ಭಿನ್ನ ಆಸಕ್ತಿ, ದೃಷ್ಠಿಕೋನ, ಆದ್ಯತೆಗಳಿಗನುಸಾರವಾಗಿ ಪ್ರತಿಕ್ರಿಯಿಸುತ್ತವೆ.

ಪುರುಷಾತ್ಮಕವಾದದ ಬಗೆಗಿನ ತಮ್ಮ ವಿಮರ್ಶೆಯನ್ನು ಅಮೂರ್ತ ನೆಲೆಯನ್ನಾಧರಿಸಿದ ಮೂರ್ತ ಹಾಗೂ ನಿರ್ದಿಷ್ಟ ವಿಷಯಗಳನ್ನಾಧರಿಸಿ ಮಹಿಳೆಯರು ಮಾಡತೊಡಗಿದರು. ಭಾವುಕತೆ–

ವೈಚಾರಿಕತೆ, ದೇಹ–ಮನಸ್ಸು, ಸಂವೇದನೆ–ವಿಚಾರ ಇವುಗಳ ನಡುವಿನ ಸಂಬಂಧವು ಮಹಿಳಾ ವಿಮರ್ಶೆಯಲ್ಲಿ ಪದೇ ಪದೇ ಪ್ರಸ್ತಾಪಿತವಾಗುತತದೆ. ಅವುಗಳ ದ್ವಂದ್ವಾತ್ಮಕ ರೂಪವನ್ನು ಒಡೆಯುವ ಮೂಲಕ ಬೇರೆ ರೀತಿಯ ಚಿಂತನೆಯನ್ನು ಮಹಿಳಾ ವಿಮರ್ಶೆ ಬೆಳೆಸಿಕೊಂಡಿತು. ನೈಸರ್ಗಿಕ ಜಗತ್ತಿನೊಂದಿಗೆ ತಮ್ಮ ಸಂಬಂಧ ಯಾವ ರೀತಿಯದಿರಬೇಕೆಂಬ ಗ್ರಹಿಕೆಯು ಮಹಿಳೆಗೆ ಉಂಟುಮಾಡಬಹುದಾದ ಅಪಾಯಗಳ ಕುರಿತು ಸ್ತ್ರೀವಾದಿ ಬರಹಗಳು ಎಚ್ಚರಿಕೆ ನೀಡುತ್ತವೆ.

ಭಾವನೆಯನ್ನು ಕೇಂದ್ರವಾಗಿಟ್ಟುಕೊಂಡ ಸ್ತ್ರೀವಾದಿ ಚಂತನೆಯ ಎಳೆಗಳಾಗಿ ಸಂವೇದನೆ, ದೇಹ, ಪ್ರಕೃತಿ ಮುಂತಾದ ವಿಷಯಗಳ ಬಗೆಗಿನ ಚಿಂತನೆಗಳ ಪ್ರಾತ್ಯಕ್ಷಿಕ ಅಧ್ಯಯನವನ್ನು 'ಹೆಸ್ಟರ್ ಐಸೆಸ್ಟೀನ್'(1984)ರಲ್ಲಿ ಅಧ್ಯಯನವನ್ನು ಮಾಡುತ್ತಾಳೆ. ಸ್ತ್ರೀವಾದದ ಎರಡನೆ ಅಲೆಯ (1960)ರಲ್ಲಿ ಸೇರಿರುವ ಮೂರ್ತ ವಿಷಯಗಳ ಸರ್ವೇಕ್ಷಣೆಯನ್ನು ಆಕೆ ಮಾಡಿದಳು. ತಾತ್ವಿಕ ವಾಗ್ವಾದಗಳ ರೂಪಣೆಯಲ್ಲಿ ವೈಚಾರಿಕತೆ, ತಾತ್ವಿಕತೆಗಳ ಜಾಗದಲ್ಲಿ ಭಾವನೆ ಹಾಗೂ ಸಂವೇದನೆಗಳ ಸ್ಥಾಪನೆಯನ್ನು ಸ್ತ್ರೀವಾದ ಒತ್ತಾಯಿಸುವುದನ್ನು ಆಕೆ ತನ್ನ ಕೃತಿಯಲ್ಲಿ ತೋರಿಸಿದಳು. *13

ಈ ಕಥೆಯಲ್ಲಿ ಬರುವ ಸರುಮಾಳು ಬಿ ಎ ಪಧವೀಧರೆ ಆದರೆ ಅವಳಿಗೆ ಉದ್ಯೋಗ ಸಿಕ್ಕಿರುವುದಿಲ್ಲ. ಒಂದು ಒಳ್ಳೆಯ ಉದ್ಯೋಗ ಪಡೆಯುವ ಹಂಬಲವನ್ನು ಹೊಂದಿದ್ದಾಳೆ. ಕುಟುಂಬದಲ್ಲಿ ಸರುಮಾಳ ಶೋಚನೀಯ ಸ್ಥಿತಿ ತನ್ನ ತಾಯಿಯನ್ನು ಕಳೆದುಕೊಂಡಂತಹ ಹೆಣ್ಣು ಮಲತಾಯಿಯ ಬಳಿ ಬೆಳೆಯಬೇಕಾಗುತ್ತದೆ. ಸದಾ ಇಬ್ಬರಿಗೂ ಜಗಳ ಮನೆಯ ಪರಿಸ್ಥಿತಿ ಸರೂಮಾಳಿಗೆ ಸಹಿಸಿಕೊಳ್ಳಲು ಕಷ್ಟವಾಗುತ್ತದೆ. ಆ ಕಾರಣದಿಂದ ಅವಳಿಗೆ ಒಂದು ಕೆಲಸವಾದರೂ ಇದ್ದರೆ, ಮನೆಯಲ್ಲಿ ತನ್ನ ಸ್ಥಾನ ಉತ್ತಮ ಸ್ಥಿತಿಯಲ್ಲಿರುತ್ತದೆ ಎನ್ನುವಂತಹ ಭಾವನೆ ಅವಳಲ್ಲಿರುತ್ತದೆ.

ಪ್ರೀತಿಗೆ ಸಂಬಂಧಿಸಿದಂತೆ –ಕೇಶವನ್ ನಾಯರ್ ಎಂಬ ವ್ಯಕ್ತಿಯೊಂದಿಗೆ ತುಂಬಾ ಆತ್ಮೀಯತೆಯಿಂದ ಇರುತ್ತಾಳೆ. ತನ್ನಲ್ಲಿನ ಭಾವನೆಯನ್ನು, ಆಸೆ, ಆಕಾಂಕ್ಷೆ ಆಕೆಯನ್ನು ಹೇಳಿಕೊಳ್ಳಲು ಆಗದೇ ಇರುವಂತಹ ಸ್ಥಿತಿಯನ್ನು ಈ ಕಥೆಯಲ್ಲಿ ಕಂಡುಬರುತ್ತದೆ. ಆದರೆ ಕೇಶವನಿಗೆ ನಾಯಕನಿಗೆ ಕುತೂಹಲ ತಡೆಯಲಾಗದೇ ಪ್ರೇಮಪತ್ರವನ್ನು ಬರೆಯುತ್ತಾನೆ. ಅವಳ ಉತ್ತರಕ್ಕೆ ಬಹಳ ನಿರೀಕ್ಷೆಯಿಂದ ದಿನಗಳನ್ನು ಕಳೆಯುತ್ತಿರುತ್ತಾನೆ.

ಇಲ್ಲಿ ಕಂಡು ಬರುವಂತಹ ಅಂಶವೆಂದರೆ ಇಬ್ಬರಲ್ಲೂ ಮುಗ್ಧ ಪ್ರೀತಿ ಇದ್ದರೂ ಸಹ ಹೇಳಿಕೊಳ್ಳಲು ಆಗದೇ ಇರುವಂತಹ ಸ್ಥಿತಿಯಲ್ಲಿ ಸರೂಮಾಳು ಯೋಚಿಸುತ್ತಿದ್ದಳು. ಕತೆಯು ಅನೇಕ ತಿರುವುಗಳನ್ನು ಹೊಂದುತ್ತದೆ.ಕೌಟುಂಬಿಕ ಸಮಸ್ಯೆಗಳು ಸಹ ಎದುರಾಗುತ್ತವೆ.

ಕೇಶವನು ಸರುಮಾಳನ್ನು ಪ್ರೀತಿಸುತ್ತಿರುವುದು ಗೊತ್ತಿದ್ದರೂ ತನಗೂ ಎಲ್ಲೋ ಒಂದು ಕಡೆ ಇಷ್ಟವಿದ್ದರೂ ಅದನ್ನು ಧೈರ್ಯವಾಗಿ ಹೇಳಲು ಆಗದೇ ನಟನೆಯ ರೀತಿಯಲ್ಲಿ ತನಗೆ ಏನೂ ಗೊತ್ತಿಲ್ಲವೆಂಬಂತೆ ನಿರ್ಲಕ್ಷ ಮನೋಭಾವದಿಂದ ವರ್ತಿಸುತ್ತಿರುತ್ತಾಳೆ. ಇವಳ ಈ ಧೋರಣೆಯು ತನ್ನ ಭಾವನೆಯನ್ನು ಹೇಳಿಕೊಳ್ಳುವುದರಿಂದ ಮುಂದೆ ತನಗೆ ಸಮಾಜದಿಂದ ಒದಗುವ ಅಪಾಯ ತೊಂದರೆಯ ಬಗ್ಗೆಯೂ ಸಹ ಈ ಹೆಣ್ಣು ಯೋಚಿಸುವುದನ್ನು ಕಾಣುತ್ತೇವೆ. ಜೀವನದ ಬಗ್ಗೆ ಮುಂದಾಲೋಚನಾ ಕ್ರಮವನ್ನು ಅನುಸರಿಸುವಂತ ವ್ಯಕ್ತಿತ್ವ ಸ್ವಭಾವವನ್ನು ಸರಮಳ ಪಾತ್ರದ ಮೂಲಕ ಕಾಣಬಹುದು.

ಪ್ರೀತಿಯ ನಂತರ ಬರುವಂತಹ ಅನೇಕ ಸಮಸ್ಯೆಗಳನ್ನು ಕುರಿತು ಸರುಮಾಳು ಯೋಚಿಸುವಂತಹ ಕ್ರಮ, ಸಂಪ್ರದಾಯ ಕುಟುಂಬದ ಜವಾಬ್ದಾರಿಗಳು, ಸಮಾಜದ ಬಗ್ಗೆ ಹೆದರಿಕೆ, ಭಯ ಅವಳನ್ನು ಸದಾ ಕಾಡುತ್ತಿದ್ದಂತ ನಿಯಮಗಳ ಚೌಕಟ್ಟಿನೊಳಗೆ ಆಕೆ ಇರಬೇಕಾದಂತಹ ಹಾಗೂ ಆಲೋಚಿಸುವಂತಹ ಕ್ರಮವಾಗಿತ್ತು.

ಸರೂಮಾಳ ಮನೆಯ ಪರಿಸ್ಥಿತಿಯು ವಿವಾಹಕ್ಕೆಂದು ಅವಳಿಗೆ ಮೂರು ವರ ಪರೀಕ್ಷೆಗಳು ನಡೆದರೂ ಸಹ ಅವು ವಿಫಲಗೊಂಡಿದ್ದಕ್ಕೆ ಮನೆಯಲ್ಲಿರುವವರು ಇವಳನ್ನ ದೂಶಿಸುವಂತಹ ಧಾರುಣ ಸ್ಥಿತಿಯಲ್ಲಿ ಬದುಕನ್ನು ನಡೆಸುತ್ತಿರುತ್ತಾಳೆ. ದಿನಾ ಮನದೊಳಗೆ ಸತ್ತು ಹುಟ್ಟುತ್ತಿರುವಂತಹ ಉಸಿರುಕಟ್ಟಿದಂತಹ ವಾತಾವರಣದಲ್ಲಿ ಅವಳು ತನ್ನ ಜೀವನದ ದಿನಗಳನ್ನು ಎಣಿಸುತ್ತಿದ್ದಳು. ಮನೆಯಲ್ಲಿ ಪ್ರೀತಿ–ವಿಶ್ವಾಸ, ನೋವು– ನಲಿವಿನ ಬಗ್ಗೆ ವಿಚಾರಿಸಿಕೊಳ್ಳುವವವರು ಯಾರೂ ಇರಲಿಲ್ಲ. ಈ ಎಲ್ಲಾ ಸಂದಿಗ್ಧತೆಯಲ್ಲಿಯೂ ಸಹ ಬ್ಯಾಂಕ್ ಉದ್ಯಮಿಯಾಗಿದ್ದ ಕೇಶವನೊಂದಿಗೆ ಸ್ನೇಹ, ಸಲಿಗೆ, ಪ್ರೀತಿ ಬೆಳೆಯುವುದು ಇಲ್ಲಿ ಪ್ರಮುಖವಾದ ಬದಲಾವಣೆಯಾಗಿ ಕಂಡುಬರುತ್ತದೆ.

ಒಂಟಿತನ ಏಕಾಂಗಿಯಾಗಿಯೇ ಈ ಸಮಾಜದ ಎಲ್ಲ ಸವಾಲಗಳನ್ನು ಎದುರಿಸುತ್ತಿರುವ ಸರುಮಾಳು ತನಗೆ ಉದ್ಯೋಗ ಒಂದೇ ತನ್ನ ಎಲ್ಲ ಸಮಸ್ಯೆಗೆ ದಾರಿ/ಪರಿಹಾರ, ತಾನು ಸ್ವತಂತ್ರವಾಗಿ ಬದುಕುವ ನಿರ್ಧಾರವನ್ನು ತೆಗೆದುಕೊಳ್ಳುವುದಕ್ಕೆ ಮುಂದಾಗುವಂತಹ ಒಬ್ಬ ದಿಟ್ಟತನದ ಹೆಣ್ಣಾಗಿ ಇವಳು ಕಂಡುಬರುತ್ತಾಳೆ. ವರದಕ್ಷಿಣೆ ಕೊಟ್ಟು ಮದುವೆ ಮಾಡಲು ಆಗದೇ ಇರುವಂತಹ ಪರಿಸ್ಥಿತಿ ಸರೂಮಾಳಮನೆಯಲ್ಲಿರುತ್ತದೆ. ಇವಳನ್ನು ಯಾರಿಗಾದರೂ ಕೊಟ್ಟು ಮದುವೆ ಮಾಡಿ ಇವಳ ಜವಾಬ್ದಾರಿಯಿಂದ ಮುಕ್ತರಾಗಬೇಕೆಂಬ ಮನಸ್ಥಿತಿಯನ್ನು ಸರೂಮಾಳ ಕುಟುಂಬದವರು ಯೋಚಿಸಿರುತ್ತಾರೆ. ಎಲ್ಲರೂ ಸಹ ಅವರವರ ಅನುಕೂಲತೆಗೆ ತಕ್ಕಂತೆ ಮಾತನಾಡುತ್ತಾರೆ. ಆದರೆ

ಸರೂಮಾಳ ವೇದನೆ, ಸಂಕಟ ಮಾತ್ರ ಯಾರಿಗೂ ಕಂಡುಬರುತ್ತಿರಲಿಲ್ಲ ತಾನೂ ಯಾರಿಗೂ ಹೊರೆಯಾಗಿರಬಾರದು ಸ್ವತಂತ್ರವನ್ನು ಬಯಸುವ ಮನಸ್ಸು, ಬಿಡುಗಡೆಯನ್ನು ಬಯಸುತ್ತಿದ್ದ ಮನಸ್ಸು ಇವಳದಾಗಿತ್ತು. ಸರೂಮಾಳು ಹೇಳುವ ವರದಕ್ಷಿಣೆ ವ್ಯಾಖ್ಯಾನವನ್ನು ಓದಿದಾಗ ಇದರಿಂದ ಆಕೆಯ ಮನಸ್ಸಿನ ಮೇಲೆ ಎಂತಹ ಕೆಟ್ಟ ಪರಿಣಾಮ ಬೀರಿದೆ ಎನ್ನುವಂತಹ ವಿಚಾರ ತಿಳಿದು ಬರುತ್ತದೆ.

## ಮದುವೆಯಾಗುವಂತಹ ಗಂಡಿನ ಬಗ್ಗೆ ನಿರ್ಲಕ್ಷ ಮನೋಭಾವದ ಸಾಲುಗಳು

"ಓಹ್! ನೀನು ನನ್ನ ಮದ್ವೆ ಮಾಕ್ಕೋಂಡು, ನಿನ್ನ ಜೊತೇಲಿ ಕರ್ಕಂಡು ಹೋದ್ರೆ, ನನಗೆ ಊಟ ಹಾಕಲಿಕ್ಕೆ, ಬಟ್ಟೆ ಕೊಡಿಸಲಿಕ್ಕೆ, ಸ್ನಾನ ಮಾಡಿಸಲಿಕ್ಕೆ ಎಣ್ಣೆ, ಪೌಡರು ಥರಥರದ ಅಲಂಕಾರ ವಸ್ತುಗಳ ಕೊಡಿಸಲಿಕ್ಕೆ, ಹೆರಿಗೆಗೆಯ ಮಗುವಿಗೆಂದು ನಾ ಸಾಯುವಾಗ, ಸತ್ತ ನಂತರ ನನ್ನ ತಿಥಿಗೆಂದು ಇವುಗಳಿಗೆಲ್ಲಾ ಹಣ ಬೇಡವೇ ?" (*14)

ಈ ಕಾರಣಕ್ಕಾಗಿ ಹುಡುಗರು ವರದಕ್ಷಿಣೆಯನ್ನು ಪಡೆಯುತ್ತಾರೆ ಎನ್ನುವುದು ಉಪೇಕ್ಷೆಯಾಗಿದೆ, ವ್ಯಂಗ್ಯವಾಗಿ ಸರುಮಾಳ ಧ್ವನಿಯಾಗಿ ಈ ಕತೆ ಕಂಡುಬರುತ್ತದೆ.

ಹೆಣ್ಣು ತನ್ನ ಜವಾಬ್ದಾರಿಯನ್ನು ಸರಿಯಾಗಿ ನಿಭಾಯಿಸುತ್ತಾಳೆ ಎನ್ನುವುದಕ್ಕೆ ಈ ಕತೆಯಲ್ಲಿ ಹಲವಾರು ನಿದರ್ಶನಗಳಿವೆ. ಈ ಕಥೆಯಲ್ಲಿ ವಿಶೇಷವಾದಂತಹ ಸಂಗಂತಿಯೆಂದರೆ ಇವಳ ವ್ಯಕ್ತಿತ್ವದಲ್ಲಿ ಮತ್ತೊಂದು ವಿಷೇಶತೆಯೆಂದರೆ ಸರೂಮಾಳು ಕೇಶವನ ಜೀವನದಲ್ಲಿ ಬಂದು ಅವನ ಜವಾಬ್ದಾರಿಗಳನ್ನು ಹಾಗೂ ಸರೂಳ ತಂದೆ-ತಾಯಿಗೆ ಅವರು ಮಾಡಬೇಕಾದ ಕರ್ತವ್ಯವನ್ನು ಮತ್ತೆ ಮರುಕಳಿಸುವಂತೆ ಮಾಡುವುದನ್ನು ಈ ಕಥೆಯಲ್ಲಿ ಕಾಣಬಹುದಾಗಿದೆ.

ಸರೂಮಾಳು ಕೇಶವನನ್ನು ಪ್ರೀತಿಸಿದ ಸೂಚನೆ ಎಲ್ಲಿಯೂ ಗೊತ್ತಾಗದಂತೆ ವರ್ತಿಸುತ್ತಾಳೆ. ಪ್ರೀತಿಯನ್ನು ಸಂಬಳಕ್ಕಾಗಿ ಮಾಡುವಂತಹದ್ದು ಹಾಗೂ ಅದೇ ರೀತಿ ಪರಿಸ್ಥಿತಿ ಬಂದೊದಗುತ್ತದೆ. ಅದಕ್ಕೆ ಅವಳು ಒಪ್ಪಿಗೆ ವ್ಯಕ್ತಪಡಿಸುವುದರ ಮೂಲಕ ಆತನನ್ನು ಜವಾಬ್ದಾರಿಯುತ ವ್ಯಕ್ತಿಯನ್ನಾಗಿ ರೂಪಿಸಿದ ಶಿಲ್ಪಿಯಂತೆ ಕಂಡು ಬರುತ್ತಾಳೆ. ತನ್ನ ಕುಟುಂದವರಿಗೆ ತನ್ನ ಮೇಲಿನ ಜವಾಬ್ದಾರಿಯನ್ನು ಸಹ ಕಡಿಮೆ ಮಾಡುವುದಕ್ಕೋಸ್ಕರ ಕೇಶವನೊಂದಿಗೆ ಮನೆ ಬಿಟ್ಟು ಹೋಗುತ್ತಾಳೆ. ಇಲ್ಲಿ ಇವಳ ಮನೋಭಾವ, ಆತ್ಮ ಸ್ಥೈರ್ಯದ ಗುಣ ಎದ್ದು ಕಾಣುತ್ತದೆ

ವಿವಾಹದ ನಂತರದ ಬದುಕಿನಲ್ಲಿ ಎದುರಾಗುವಂತಹ ಸಮಸ್ಯೆಯನ್ನು ಕುರಿತು ಇಬ್ಬರೂ ಮೊದಲೇ ಚರ್ಚಿಸುವ, ಆಲೋಚಿಸುವಂತದ್ದು, ಈ ಕಥೆಯಲ್ಲಿ ಮುಖ್ಯವಾಗಿ ಕಂಡುಬರುತ್ತದೆ. ಇಬ್ಬರದೂ ಬೇರೆ-ಬೇರೆ ಜಾತಿಯವರಾಗಿರುತ್ತಾರೆ. ಧರ್ಮ, ಜಾತಿಗಳನ್ನು ಮೀರಿದ ಆಲೋಚನೆ ಇಬ್ಬರೂ ಮಾಡುತ್ತಾರೆ. ಪ್ರೀತಿಗೆ ಅಡ್ಡಿಪಡಿಸುವಂತಹ ಈ ಜಾತಿ ಧರ್ಮವಾಗಲಿ ನಮಗೆ ಬೇಡ

ಎನ್ನುವ ನಿರ್ಣಯ ತೀರ್ಮಾನಕ್ಕೆ ಬರುವಂತದ್ದು ತುಂಬಾ ಕಷ್ಟಕರವಾದದ್ದು. ಆದರೂ ಅಂತಹ ದಿಟ್ಟ ಹೆಜ್ಜೆ ಹಾಕುತ್ತಾಳೆ ಪ್ರೇಮ ವಿವಾಹಕ್ಕೆ ಮುಂಚೆ ಒಂದು ಹೆಣ್ಣು ಎಷ್ಟೆಲ್ಲಾ ಆತಂಕಕ್ಕೆ ಒಳಗಾಗುತ್ತಾಳೆ. ತಲ್ಲಣಗಳು ಇವುಗಳ ಬಗ್ಗೆ ಯೋಚಿಸುವಂತಹ ಕ್ರಮ ಬಹಳ ಆಶಾದಾಯಕವಾದದ್ದಾಗಿದೆ.

19ನೇ ಶತಮಾನದ ಕಾಲಘಟ್ಟದಲ್ಲಿ ಧರ್ಮ ಜಾತಿಯನ್ನು ಬಿಡುವಂತಹ ಅಥವಾ ಮೀರುವಂತಹ ಪರಿಕಲ್ಪನೆಯನ್ನು ಯಾರೂ ಒಪ್ಪುತ್ತಿರಲಲಿಲ್ಲ. ಅಂತಹ ಸಂದರ್ಭದಲ್ಲಿಯೂ ಸಹ ಇವರಿಬ್ಬರು ಧೈರ್ಯ ಮಾಡಿರುವಂತ ವಿಚಾರ ಶ್ಲಾಘನೀಯವಾದಂತದ್ದು, ಸಮಾಜದ ಕಟ್ಟುಪಾಡಿಗೆ ಬದಲಾಗದಂತೆ ತಮ್ಮ ಜೀವನವನ್ನು ರೂಪಿಸಿಕೊಂಡರು.

ತಮ್ಮ ಮುಂದಿನ ಜೀವನದ ಬಗ್ಗೆ ಮಹದಾಸೆಯನ್ನು ಹೊಂದಿರುವ ಈ ಸರೂಮಾಳು ತನಗೆ ಹುಟ್ಟುವ ಮಗುವಿನ ಬಗ್ಗೆ ಆಲೋಚಿಸುತ್ತಾಳೆ. ಸಮಾಜದಲ್ಲಿ ಈ ಮಗು ಯಾವ ರೀತಿ ಬದುಕಬೇಕೆಂದು, ಆ ಮಗು ಯಾವ ಧರ್ಮಕ್ಕೆ ಸೇರ ಬೇಕೆಂಬ ಜಿಜ್ಞಾಸೆ/ಆತಂಕವನ್ನು ವ್ಯಕ್ತ ಪಡಿಸುತ್ತಾಳೆ. ನಂತರ ಮಗುವಿಗೆ ಯಾವ ಧರ್ಮದ ಹೆಸರಿಡಬೇಕೆಂದು ಯೋಚಿಸುವಂತಹ ಸ್ಥಿತಿಯನ್ನು ಕಂಡರೆ, ವಿವಾಹಕ್ಕೂ ಮೊದಲು ಇಷ್ಟೆಲ್ಲಾ ಬಗೆಯಾಗಿ ಯೋಚಿಸುವುದು ನಿರ್ಧಾರವನ್ನು ತೆಗೆದುಕೊಳ್ಳುವಂತದ್ದು. ಬಷೀರ್‌ರವರ ಆದರ್ಶ ವಿವಾಹ ಪದ್ಧತಿಯನ್ನು ಸೂಚಿಸುತ್ತದೆ. ಮನೆ ಬಿಟ್ಟು ತನ್ನ ಪ್ರಿಯಕರನೊಂದಿಗೆ ಹೋಗುವುದಕ್ಕೂ ಮುಂಚೆ ಅನೇಕ ರೀತಿಯಲ್ಲಿ ಯೋಚಿಸಿ ನಿರ್ದಾರವನ್ನು ಪಡೆಯುವ ವಿಚಾರವನ್ನು ಬಷೀರ್‌ರವರು ತಮ್ಮ ಕಥೆಯಲ್ಲಿ ಹಿಡಿದಿಟ್ಟಿದ್ದಾರೆ.' 21ನೇ ಶತಮಾನದಲ್ಲಿ ಮಹಿಳೆ ಎದುರಿಸುತ್ತಿರುವಂತಹ ಸಮಸ್ಯೆಗಳಿಗೆ ಸಂಬಂಧಿಸಿದ ವಿಚಾರಗಳನ್ನು ಅವರು ಮೋದಲೇ ತಮ್ಮ ಕಥೆಗಳ ಮೂಲಕ ಅಭಿವ್ಯಕ್ತಿಸಿದ್ದಾರೆ .

ಪ್ರಬುದ್ಧವಾದ ಪ್ರೌಢ ಮನಸ್ಥಿತಿಯವರ ಪ್ರೇಮವು ಬಹಳ ಮುಖ್ಯವಾದುದು ಎಂಬುದನ್ನು ಗಮನಿಸಬೇಕು. ಒಂದು ಬದುಕನ್ನು ಕಟ್ಟುವ ಕ್ರಮ, ಪ್ರೌಢತ್ವ, ಬುದ್ಧಿವಂತಿಕೆ, ತಾಳ್ಮೆ ಎಲ್ಲವೂ ಸರುಮಾಳಲ್ಲಿದೆ. ಮುಂದಾಲೋಚನೆ ಕಡಿಮೆ ಇರುವ ಕೇಶವನನ್ನು ಬದಲಾಯಿಸಿ ವಿವಾಹವಾಗುವ ಅವಳು ಅತ್ಯಂತ ಯಶಸ್ವಿ ಹೆಣ್ಣು. ಅಲ್ಲದೆ ಅಂತರಜಾತಿ ವಿವಾಹದಲ್ಲಿ ಇರಬೇಕಾದ ದೂರದೃಷ್ಟಿ ಬಹಳ ಮುಖ್ಯವಾದುದು.

" ಒಂದು ಹಳೆಯ ಪ್ರೇಮ ಕಥೆ" ಈ ಕಥೆಯಲ್ಲಿ ಪ್ರೀತಿಸಿದ ಹುಡುಗಿಯಿಂದ ಅವನು ನಗುವುದನ್ನು ಕಲಿತನು. ನಗು ಎನ್ನುವಂತದ್ದು ಅಧೀನತೆಯ ಸಂಕೇತ ಎನ್ನುವಂತಹ ಭಾವನೆ ಅವನಲ್ಲಿತ್ತು. ಒಂದು ಹೆಣ್ಣಿನ ಮೂಲಕ ಜೀವನದಲ್ಲಿ ನಗು ಎನ್ನುವ ಪಾಠವನ್ನು ಕಲಿಯುತ್ತಾನೆ. ಹಣ್ಣಿನ ಮೂಲಕ ಬದಲಾವಣೆಯನ್ನು ಕಾಣಬಹುದು.

(ಯೌವನ ಜೀವನದ ಒಂದು ಕ್ಷಣದಲ್ಲಿ ನಡೆದ ಹಲವು ಘಟನೆಗಳಲ್ಲಿ ಪ್ರೇಮವು ಒಂದು ವಿವಾಹಿತ ಸ್ತ್ರೀ ಯೊಂದಿಗಿನ ಪ್ರೇಮ ಪ್ರಕರಣವನ್ನು ಈ ಕಥೆಯಲ್ಲಿ ಕಾಣಬಹುದು)

ಮುಸ್ಲಿಂ ಸಮುದಾಯದ ಹೆಣ್ಣಿನ ಪರಿಸ್ಥಿತಿಯನ್ನು ಕುರಿತು ಬಷೀರ್‌ರವರು ತಮ್ಮ ಕಥೆಗಳಲ್ಲಿ ವಿವರಿಸುತ್ತಿದ್ದಾರೆ. ಸ್ತ್ರೀಯರ ಸಂವೇದನೆಯನ್ನು ಕುರಿತಂತೆ ಅವರು ಪ್ರಾತಿನಿದಿಕವಾಗಿ ಒಂದು ಕುಟುಂಬದ ಸ್ಥಿತಿ–ಗತಿಯನ್ನು ಸಹ ತಮ್ಮ ಕತೆಗಳಲ್ಲಿ ಚಿತ್ರಿಸುತ್ತಾರೆ.

ಆ ಹುಡುಗಿಯ ಪ್ರೀತಿ ಈ ಯುವಕನಿಗೆ ಸಿಕ್ಕಿದರೂ ಅವಳು ಅಷ್ಟು ಧೈರ್ಯವಾಗಿ ಇವನೊಟ್ಟಿಗೆ ಮಾತನಾಡುವುದಾಗಲಿ/ನೋಡುವುದಾಗಲಿ ಮಾಡಲು ಆಗದೇ ಇರುವಂತಹ ಸಂಧಿಗ್ದ ಸ್ಥಿತಿಯಲ್ಲಿ ಆಕೆಯ ಮನಸ್ಸು ತೊಳಲಾಡುತ್ತಿತ್ತು. ಪ್ರೀತಿಯನ್ನು ಸ್ವೀಕರಿಸಬೇಕೋ ಅಥವಾ ನಿರಾಕರಿಸಬೇಕೋ ಎನ್ನುವಂತಹ ಗೊಂದಲ ಸ್ಥಿತಿಯಲ್ಲೇ ಮೌನವಾಗಿ ಒಪ್ಪಿಕೊಳ್ಳುವಂತದ್ದು, ಮನೆಯ ಚೌಕಟ್ಟನ್ನು ಮೀರಿ ಹೊರಹೋಗುವಂತ ವಿಚಾರದಲ್ಲಿ ಅವಳು ಆಸಕ್ತಿ ತೋರುವುದಿಲ್ಲ. ಮಾನಸಿಕವಾಗಿ ಅವಳಲ್ಲಿ ಆತ್ಮಸ್ಥೈರ್ಯ ಧೈರ್ಯದ ಕೊರತೆ ಎದ್ದುಕಾಣುತ್ತದೆ. ಇಂತಹ ಸಾಮಾನ್ಯ ಮನುಷ್ಯನ ಬದುಕಿನ ಪ್ರೀತಿ, ರಾಗ, ಜೀವನವನ್ನು ಬಷೀರ್‌ರವರು ತಮ್ಮ ಕಥೆಗಳಲ್ಲಿ ಹಿಡಿದಿಟ್ಟಿರುವುದು ಅವರ ಬರವಣಿಗೆಯ ಒಂದು ವಿಶೇಷವಾದ ಶಕ್ತಿಯಾಗಿ ಕಂಡುಬರುತ್ತದೆ. ಜೀವನದ ಎಲ್ಲಾ ಆಯಾಮಗಳಿಂದಲೂ ಸಹ ಕಥೆಯನ್ನು ನೋಡುವ ಕ್ರಮ ಓದುಗನನ್ನು ಚಿಂತನೆಗೆ ತರುವಂತಹ ಬರವಣಿಗೆಯ ಶಕ್ತಿ ಅವರಲ್ಲಿದೆ.

'ಹೂಬಾಳೆ' ಎನ್ನುವ ಕಥೆಯಲ್ಲಿ – ಸ್ತ್ರೀಗೆ ಹೆಚ್ಚಿನ ಮನ್ನಣೆ ನೀಡಿದರೂ ಸಹ ಎಲ್ಲೊ ಮತ್ತೊಂದು ಕಡೆ ಪುರುಷನ ದೌರ್ಜನ್ಯವೂ ಹೆಣ್ಣಿನ ಮೇಲೆ ಆಗುವಂತೆ ಕಂಡುಬರುತ್ತದೆ.

ಗಂಡನ ಮಾತನ್ನು ಕೇಳದೆ ಇದ್ದದ್ದಕ್ಕೆ ಅವನು ತುಂಬಾ ಕ್ರೂರವಾದ ರೀತಿಯಲ್ಲಿ ವರ್ತಿಸುವಂತಹದ್ದನ್ನು ಕಾಣಬಹುದು. ಹೆಣ್ಣು ಎಂದು ಲೆಕ್ಕಿಸದೆ ದನಕ್ಕೆ ಬಡಿದ ಹಾಗೆ ಬಡಿಯುತ್ತಾನೆ. ಹೆಣ್ಣು ಯಾವಾಗಲೂ ಗಂಡಿನ ಅಧೀನವಾಗಿರಬೇಕು ಎನ್ನುವಂತಹ ಸ್ವಾರ್ಥಗುಣವನ್ನು ಸೂಚಿಸುತ್ತದೆ.ಹೆಣ್ಣನ್ನು ಸ್ವತಂತ್ರವಾಗಿ ಆಲೋಚಿಸಲು ಬಿಡದೆ, ತನ್ನ ಹಿಡಿತವನ್ನು ಸಾಧಿಸುವಂತೆ ತನ್ನ ಹತೋಟಿಯಲ್ಲೇ ಬಂಧಿಸಿಡುವಂತದ್ದನ್ನು ಈ ಹೂ ಬಾಳೆ ಕತೆಯೇ ಕಾಣಬಹುದಾಗಿದೆ. ಹೆಣ್ಣಿಗೂ ಸಹ ಒಂದು ಆಸೆ, ಆಕಾಂಕ್ಷೆ, ಭಾವನೆಗಳಿರುತ್ತವೆ ಎನ್ನುವುದನ್ನು ಮರೆತು ಪುರುಷ ತನ್ನ ವರ್ತನೆಯನ್ನು ತೋರಿಸುವುದೇ ಯಾವಾಗಲೂ ಅಸಹಾಯಕರ ಮೇಲೆ ಎಲ್ಲ ಕಾಲಕ್ಕೂ ಎಷ್ಟೇ ಪ್ರೀತಿಸಿದರೂ ಹೆಣ್ಣು 'ಹೆಣ್ಣೇ' ಎಂಬ ರೀತಿಯಲ್ಲಿ ಖಾದರ್ ಸಾಹೇಬರು ವರ್ತಿಸುತ್ತಾರೆ.

"ಜೀವನದ ಕರಿನೆರಳು:– ಈ ಕತೆಯಲ್ಲಿ ಪ್ರಮುಖವಾಗಿ ಎಲ್ಲಾ ವಯೋಮಾನದ ಮಹಿಳೆಯರ ಬದುಕಿನ ಜೀವನ ಚಿತ್ರಣವನ್ನು ಈ ಕತೆ ಪ್ರತಿಬಿಂಬಿಸುತ್ತದೆ. ಈ ವೇಶ್ಯಾವೃತ್ತಿ ಹೆಣ್ಣು ತಾನಾಗಿ

ಬಯಸಿದಂತಹ ವೃತ್ತಿಯಲ್ಲ. ಅದು ಜೀವನದ ಕೆಲವು ಸಂದರ್ಭ, ಸನ್ನಿವೇಶಗಳು ಆಕೆಯನ್ನು ಸಮಾಜ ಬಾಹಿರ ಕೆಲಸದಲ್ಲಿ ತೊಡಗುವಂತೆ ಪ್ರೇರೇಪಿಸುತ್ತದೆ.

ಇಂತಹ ಸ್ಥಿತಿ ಇಂದಿಗೂ ಕೂಡ ಪ್ರಸ್ತುತವಾಗಿರುವುದು ಕಂಡುಬರುತ್ತದೆ. ವೇಶ್ಯೆಯ ಜೀವನ, ಆ ಹೆಣ್ಣಿನ ಸ್ಥಿತಿಗತಿ ಸಮಾಜದಲ್ಲಿ ಬಹಳ ಕೀಳಾಗಿ ಕಾಣುವಂತಹ ಮನಸ್ಥಿತಿಗಳೇ ಹೆಚ್ಚಾಗಿ ಕಂಡುಬರುತ್ತದೆ. ಈ ವೃತ್ತಿಯ ಜೀವನವು ಆ ಹೆಣ್ಣಿನ ಗೌರವ, ಮರ್ಯಾದೆ ಎಲ್ಲವನ್ನು ಕಳೆದುಕೊಳ್ಳುವಂತೆ ಮಾಡುತ್ತದೆ. ಹಾಗೂ ರೋಗಗಳ ಆಗಾರವಾಗಿ ಆಕೆ ಬವಣಿಯನ್ನು ಪಡಬೇಕಾಗುತ್ತದೆ. ಇವಳ ಮನೋವೇದನೆ, ನೋವು, ಸಂಕಟ, ಯಾರಬಳಿಯೂ ಹೇಳಿಕೊಳ್ಳಲಾಗದ ಒದ್ದಾಟಗಳು, ವಿಧಿ ಇಲ್ಲದೆ ಒಪ್ಪಿಕೊಳಬೇಕಾದ ಪರಿಸ್ಥಿತಿ ಆ ಬಲೆಯಿಂದ ಬಿಡಿಸಿಕೊಳ್ಳಲಾಗದೆ ಒದ್ದಾಡುವಂತಹ ಎಷ್ಟೋ ಹೆಣ್ಣುಮಕ್ಕಳ ಪರಿಸ್ಥಿತಿ ಇಂದು ಶೋಚನೀಯ ಸ್ಥಿತಿಯಲ್ಲಿರುವುದನ್ನು ಕಾಣಬಹುದು. ಇಂತಹ ಸಮಸ್ಯೆಗಳ ಬಗ್ಗೆ ಈ ಕತೆಯು ಸಂವಾದಿಸುತ್ತದೆ.
ಈ ಕತೆಯಲ್ಲಿ ಬರುವಂತಹ ವಸಂತಕುಮರಿ ಎಂಬ ವೇಶ್ಯೆಯ ಬಗ್ಗೆ ಹೇಳುತ್ತಾ ಇಡೀ ಸಮಾಜದ ಎಲ್ಲರನ್ನು ಈ ಕತೆ ಅಥೈಸುತ್ತದೆ. ಎನ್ನವುದು ನನ್ನ ಭಾವನೆ.

ಮಹಮ್ಮದ್ ಅಬ್ಬಾಸ್‌ನು ಈ ವೇಶ್ಯೆಯರ ಬಗ್ಗೆ ತಳೆದಿರುವಂತಹ,ಅದರಲ್ಲೂ ಒಬ್ಬ ಪುರುಷನಿಂದ ಬರುವಂತ ಮಾತುಗಳು "ಕಾಸಿಗಾಗಿ ಸಕಲವನ್ನೂ ಅಡವಿಡುವ ಪರದೇಶಿಗಳು, ಹೃದಯ ಹೀನ ರಾಕ್ಷಿಸಿಗಳು, ಪ್ರೀತಿ ವಿಶ್ವಾಸಗಳ ಸೆಲೆಯಿಲ್ಲ. ಕರುಣೆ ಅನುಕಂಪಗಳೆಂಬ ಸ್ತ್ರೀ ಗುಣಗಳು ಅವರಿಂದ ದೂರವಾಗಿವೆ. ಕೊಲೆ, ಮೊಸ....... ಅಯ್ಯೋ ಸರ್ವನಾಶದ ದಾರಿಗಳು! ಬದುಕನ್ನು ಕೊರೆದು ಮುಗಿಸಿಬಿಡುವ ಕ್ರೂರಿಗಳು."

ಈ ರೀತಿಯಾದಂತಹ ಮನೋಭಾವನೆಯನ್ನು ಈ ಕತೆಯಲ್ಲಿ ಬರುವ ಒಬ್ಬ ಪ್ರತಿಷ್ಟಿತ ಮನೆತನದ ಯುವಕ ಅಬ್ಬಾಸ್‌ನ ದೃಷ್ಟಿಯಲ್ಲಿ ಹೆಣ್ಣನ್ನು ಈ ರೀತಿ ಚಿತ್ರಿಸುತ್ತಾನೆ. ಅಂದರೆ, ಇವನು ಮಹಿಳೆಯರನ್ನು ನೋಡುವ ರೀತಿಯೇ ತಾತ್ಸಾರಮನೋಭಾವದ ರೀತಿಯಲ್ಲಿ ಕಾಣುತ್ತಾನೆ.

ಮಹಿಳಯರ ಬಗ್ಗೆ ಹೊಂದಿರುವಂತಹ ತಿರಸ್ಕೃತ ಮನೋಭಾವವನ್ನು ಈ ಕತೆಯಲ್ಲಿ ಅಬ್ಬಾಸ್‌ನ ಪಾತ್ರದಲ್ಲಿ ಕಾಣಬಹುದು.

ಮಹಿಳೆ ಇಂತಹ ಹೀನಾಯ ಕೃತ್ಯಕ್ಕೆ ಒಳಗಾಗಲು ಈ ಸಮಾಜವಾಗಿರಬಹುದು, ಕೌಟುಂಬಿಕ ಪರಿಸರ, ಆರ್ಥಿಕ ಸಮಸ್ಯೆಗಳು, ಪುರಷನ ಕಾಮುಖ ವ್ಯಕ್ತಿತ್ವ ಇತ್ಯಾದಿಗಳು ಮಹಿಳೆಯನ್ನು ಈ ರೀತಿ ಸೃಷ್ಟಿಸಿವೆ.

ವಸಂತಕುಮರಿಯನ್ನು ಸಹ ಇವನು ಅವಳ ಪ್ರೀತಿಯನ್ನು, ಔದಾರ್ಯವನ್ನು, ಅನುಕಂಪ, ಸ್ನೇಹವನ್ನು ಅನುಮಾನದಿಂದ ನೋಡುವಂತಹ, ಮತ್ತು ಸತ್ಯಾ, ಸತ್ಯತೆಯನ್ನು ಪರೀಕ್ಷಿಸುವ , ಹಾಗೂ ಅವಳ ಮನಸ್ಥಿತಿಯನ್ನು ಅರ್ಥಮಾಡಿಕೊಳ್ಳದೇ ಅವನು ಅವಳನ್ನು ಹೀಗಳೆಯುವಂತಹ, ಜರೆಯುವಂತಹ ಹಾಗೂ ಅವಮಾನಗೊಳಿಸುವಂತಹ ರೀತಿಯಲ್ಲಿ ಅವಳೊಂದಿಗೆ ವರ್ತಿಸುತ್ತಾನೆ.

ವಸಂತ ಕುಮಾರಿಯ ವ್ಯಕ್ತಿತ್ವನ್ನೇ ಅನುಮಾನಿಸುವ ಸ್ಥಿತಿ ಕತೆಯುದ್ದಕ್ಕೂ ಕಂಡು ಬರುತ್ತದೆ. ಹೆಣ್ಣಿನ ಮನಸ್ಸನ್ನು ಅರ್ಥಮಾಡಿಕೊಳ್ಳದೇ ಅವಳನ್ನು ಅವಮಾನಗೊಳಿಸುವಂತಹ, ಹಾಗೂ ತುಂಬಾ ತಾತ್ಸಾರವಾಗಿ ಕಾಣುವಂತಹದ್ದು, ಸಹಾಯ ಮಾಡಲು ಬಂದಹವಳನ್ನೇ ಬೈದು ಕಳಿಸುವಂತಹ ಕಾರ್ಯವನ್ನು ಅಬ್ಬಾಸ್ ಮಾಡುತ್ತಾನೆ. ಅವಳನ್ನು ಹೀಯಾಳಿಸಿ, ನಿನ್ನ ಉಪಚಾರ ನನಗೆ ಬೇಡ. ನೀನು ಗಂಡಸರನ್ನು ಮೋಸದಿಂದ ತಮ್ಮ ಕಡೆಸೆಳೆಯುವಂತಹ ಮನೋವೃತ್ತಿ ನಿನ್ನದು. ಇಲ್ಲಿಂದ ಹೋಗು. ನನ್ನ ಬಳಿ ಹಣವಿಲ್ಲ ಎಂದು ಅವಳನ್ನೇ ಹೀಗಳೆದನು. ಪುರುಷನ ದೌರ್ಜನ್ಯ, ದಬ್ಬಾಳಿಕೆಯನ್ನು ಆ ಅಸಹಾಯಕ ಹೆಣ್ಣು ಹಿಂಸೆ ಪಡುವ ರೀತಿಯಲ್ಲಿ ವ್ಯತೆಪಡುವುದನ್ನೇ ಕತೆಯಲ್ಲಿ ವಿವರಿಸಿದ್ದಾರೆ. ಅಬ್ಬಾಸ್‌ನ ಮೂದಲಿಸುವ ಸ್ವಭಾವದಿಂದಾಗಿ ಅವಳ ನಗು ತುಂಬಿದ ಮುಕ ಬಿಳಿಚಿಕೊಂಡಿತು. ತುಂಬಾ ದೀನಳಾಗಿ ಅವಳು ಹಲುಬಿದಳು.

“ನಾನು ದುಡ್ಡಿಗಾಗಿ ಬಂದಿಲ್ಲ ......... ನನಗೆ ನಿಮ್ಮ ಹಣ ಬೇಡ!”
“ಅವನ ಕೋಪ ಹೆಡೆಬಿಚ್ಚಿತು. ಸಿಟ್ಟಿನಿಂದ ದುರುಗುಟ್ಟಿಕೊಂಡು ನೋಡುತ್ತಾ. ದುಡ್ಡಿಗಾಗಿ ಅಲ್ವಾ? ಮತ್ತೇನಕ್ಕೆ ಬಂದೆ? ನನ್ನ ಮರಳು ಮಾಡಲಿಕ್ಕಾ? ಹೃದಯವಿಲ್ಲದ ಪ್ರಾಣಿಗಳು. ತೊಲಗಿಲ್ಲಿಂದ”......! ಎಂದು ಗದರಿದನು. ಆದರೂ ವಸಂತಕುಮಾರಿಯ ಸ್ವಭಾವ ಎಂತಹದ್ದು ಎನ್ನುವುದಕ್ಕೆ ಇಲ್ಲಿ ಸಾಕ್ಷಿಯಂತೆ – ಅಬ್ಬಾಸ್‌ನ ನಿಂದನೆ ಮಾತಗಳಿಗೂ ಅವಳು ಸಹನೆಯನ್ನು ತೆಗೆದುಕೊಂಡು ಬೇಸರದ ನಗು ನಕ್ಕು ಹೊರನಡೆದಳು

ಅಬ್ಬಾಸ್ ಮೂರು ದಿನದಿಂದ ಹಸಿದಿದ್ದನು. ಮತ್ತು ಮನೆಯ ಯಜಮಾನ ಬಂದು ಬಾಡಿಗೆ ಕೊಡುವಂತೆ ಗಲಾಟೆ ಮಾಡಿದನು. ಇದನ್ನೆಲ್ಲಾ ಗಮನಿಸಿದಂತಹ ವಸಂತಕುಮಾರಿಯ ಮನಸ್ಸು ಮರುಗಿ, ಅವನಿಗೆ ಸಹಾಯ ಮಾಡುವುದಕ್ಕೆ ಬಂದು ತಾನೇ ಆಪಾದನೆಗೆ ಗುರಿಯಾಗುವಂತಹ ಪರಿಸ್ಥಿತಿಗೆ ಒಳಗಾಗುತ್ತಾಳೆ. ಒಳ್ಳೆಯ ತನಕ್ಕೆ ಬೆಲೆಯಿಲ್ಲ. ಹೃದಯಹೀನನಂತೆ ಅಬ್ಬಾಸ್ ಇವಳ ವಿಷಯದಲ್ಲಿ ವರ್ತಿಸುತ್ತಾನೆ.

ಅಬ್ಬಾಸ್‌ನಿಗೆ ಜಬ್ಬಾರ್ ಎನ್ನುವ ಸ್ನೇಹಿತನ ಮಾತಿನಿಂದ ಗಾಬರಿಯಾಗುತ್ತದೆ. ತಬ್ಬಿಬ್ಬಾದ. ಏನು ಹೇಳಬೇಕೆಂದೇ ತೋಚದೆ ಮಂಕಾಗಿ ಹೋದ.

ಜಬ್ಬಾರ್ ಹೇಳಿದ. ಪರವಾಗಿಲ್ಲ ನೀನವಳನ್ನು ಮದುವೆಯಾಗು!

"ಸೂಳೆಯನ್ನು ಹೆಂಡತಿ ಮಾಡಿಕೊಳ್ಳುವುದೆ ಆಗುವುದಿಲ್ಲ. ಸಾವಿರ ತೊಂದರೆಗಳಿವೆ ಅಬ್ಬಾಸ್ ವಿರೋಧಿಸಿದ.

ಎಷ್ಟು ಜನ ಅವಳನ್ನು ತಬ್ಬಿಕೊಂಡಿರಬಹುದು. ಎಷ್ಟು ಜನ ಅವಳನ್ನು ಚುಂಬಿಸಿರಬಹುದು! ಎಷ್ಟು ಜನರಿಗವಳು ತನ್ನನ್ನು ಮಾರಿಕೊಂಡಿರಬಹುದು?

ಎಷ್ಟು..... ಎಷ್ಟು.....

ಗೆಳೆಯ ತಡೆದು ಗಂಬೀರವಾಗಿ ಹೇಳಿದ:

ಬೇಕಾಗಿ ಅವಳು ಅದನ್ನು ಮಾಡಿರಲಿಕ್ಕಿಲ್ಲ. ಬದಲು ಇದಕ್ಕಿಂತ ಬೇರೆನಾದರೂ ಮಾರ್ಗಗಳಿದ್ದರೆ ಹೆಚ್ಚಿನ ಹೆಂಗಸರು ಈ ದಾರಿ ಹಿಡಿಯುವುದಿಲ್ಲ. ಒಬ್ಬ ವೇಶ್ಯೆಯ ಬಗ್ಗೆ ಜಬ್ಬಾರನಿಗಿರುವಂತಹ ಸಹಾನುಭೂತಿ, ಗೌರವ ಸದ್‌ಭಾವನೆಯನ್ನು ಇಲ್ಲಿ ಕಾಣಬಹದು ,ಯಾವ ಹೆಣ್ಣೂ ಸಹ ತಾನು ಸೂಳೆಯಾಗಿ ಬದುಕಲು ಇಷ್ಟಪಡುವುದಿಲ್ಲ. ಇದೇ ವಿಚಾರವನ್ನು ಜಬ್ಬಾರನೂ ಸಹ ಹೇಳುತ್ತಾನೆ.

ಅಬ್ಬಾಸ್ ವೇಶ್ಯಾವೃತ್ತಿ ಸಮಾಜಕ್ಕೆ, ಹೆಣ್ಣಿನ ಸ್ಥಿತಿಗೆ ಅದು ಮಾರಕ, ಕಳಂಕವೆಂದು ಭಾವಿಸಿದರೆ ಜಬ್ಬಾರನು, ಒಬ್ಬ ವಿಚಾರವಂತ/ ತಿಳುವಳಿಕೆಯುಳ್ಳ ವ್ಯಕ್ತಿಯಾಗಿ ನಮಗೆ ಕಂಡುಬರುತ್ತಾನೆ. ಸ್ತ್ರೀ ಪರವಾದ ಆಲೋಚನೆ, ಧ್ವನಿ ಎತ್ತುವಂತಹ ಕೆಲವು ವಿಚಾರಗಳು ಈ ಕತೆಯಲ್ಲಿ ಕಂಡು ಬರುತ್ತವೆ.

ಮಹಿಳೆ ಯಾಕೆ ವೇಶ್ಯಾವೃತ್ತಿಗಿಳಿಯುತ್ತಾಳೆ? ಎನ್ನುವುದಕ್ಕೆ ಜಬ್ಬಾರನು ನೀಡುವಂತಹ ಕಾರಣಗಳು ಕತೆಯಲ್ಲಿ ಈ ರೀತಿ ಇವೆ. ಅವುಗಳೆಂದರೆ, "ತಾಳಲಾರದ ಹಸಿವು, ಬಿಡಲಾರದಂಥ ಬದುಕಿನ ಅಗತ್ಯಗಳು, ಅವಳನ್ನು ಸೂಳೆಯನ್ನಾಗಿ ಮಾಡಿರಬೇಕು. ಆ ಅಗತ್ಯಗಳೇ ಅವಳನ್ನು ಯಾರನ್ನಾದರೂ ತಬ್ಬಿಕೊಳ್ಳುವಂತೆ ಮಾಡಿರಬೇಕು. ತಾಳಲಾರದ ಹಸಿವು ಯಾರನ್ನಾದರೂ ಚುಂಬಿಸುವಂತೆ ಮಾಡಿರಬೇಕು. ಅವಳು ಮನಃಪೂರ್ವಕವಾಗಿ ಅದಾವುದನ್ನೂ ಮಡಿರಲಿಕ್ಕಿಲ್ಲ. ಅವಳ ಹೃದಯ ನಿಜವಾದ ಪ್ರೀತಿಗಾಗಿ ಕನವರಿಸುತ್ತಿದೆ ಅಂತ ನನಗನಿಸುತ್ತೆ. ನೀನೊಮ್ಮೆ ಯೋಚಿಸಿ ನೋಡು, ಹಣವಿಲ್ಲದೆ ತನ್ನವರಾರೂ ಇಲ್ಲದೆ ಆ ಹಾಳು ಗುಡಿಸಲಿನಲ್ಲಿ ನರಕದ ಬದಕು ಬದುಕುವಾಗಲೂ ಅವಳು ಯಾಕೆ ನಿನಗೆ ಸಹಾಯ ಮಾಡಲು ಬಂದಿರಬೇಕು? ಏನು ನೋಡಿ ಅವಳು ನಿನ್ನ ಮರಳು ಮಾಡಲು ಪ್ರಯತ್ನಿಸಬೇಕು? ಛೇ ಪ್ರೇಮ ತುಂಬಿದ ಅವಳ ಹೃದಯವನ್ನೇ ನಿನಗೆ ಕಾಣಿಕೆಯಾಗಿ

ತಂದಿದ್ದಳು. ಆದರೆ ನೀನದ್ನನು ನಿರ್ದಾಕ್ಷಣ್ಯವಾಗಿ ನಿರಾಕರಿಸಿದ್ದೀಯಾ.*15.

ಹೆಣ್ಣಿನ ಕ್ರೂರವಾದ, ಭಯಂಕರವಾದ ಜೀವನವನ್ನು ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ತನಗೆ ಇಚ್ಚೆ ಇಲ್ಲದೆ ಇದ್ದರೂ ಸಹ ಕೆಲವೊಂದು ವಿಚಾರಗಳಲ್ಲಿ ಅವಳು ತನ್ನನ್ನು ತಾನು ತೊಡಗಿಸಿಕೊಳ್ಳಲೇಬೇಕಾದಂತಹ ಹಾಗು ತನ್ನನ್ನು ತಾನು ಅರ್ಪಿಸಿಕೊಳ್ಳಲೇ ಬೇಕಾದ ಅನಿವಾರ್ಯತೆ, ಅಸಹಾಯಕ ಮನಸ್ಥಿತಿಯನ್ನು ಹೆಣ್ಣಿನ ಎಲ್ಲರೀತಿಯ ಸಂವೇದನೆ, ಬವಣೆಗಳನ್ನು ಈ ಕತೆಗಳಲ್ಲಿಪ್ರತಿಪಾದಿಸಲಾಗಿದೆ. ಬದುಕೆಂಬ ರಥವನ್ನು ಸಾಗಿಸಲು ಮಹಿಳೆಯರು ಅನುಸರಿಸುವಂತಹ ಮಾರ್ಗ, ಆದರೆ, ಇದು ಅನಿವಾರ್ಯತೆಯೂ ಆಗಿ ಹೋಗಿದೆ ಎನ್ನುವ ವಿಚಾರ ಈ ವೇಶ್ಯಾಸಮಸ್ಯೆಗೆ ತುತ್ತಾಗುವಂತೆ ಮಾಡಿದೆ. ಇದರಿಂದ ಇಡೀ ಸಮಾಜಕ್ಕೆ ಕಳಂಕದಂತೆ / ಆರೋಗ್ಯಕರ ಸಮಾಜವನ್ನೇ ನಿರ್ಮಿಸುವುದಕ್ಕೆ ಸಾಧ್ಯವಾಗದ ಸ್ಥಿತಿಯನ್ನು ಇಂದು ನಾವು ಕಾಣಬಹುದಾಗಿದೆ. ಇಂತಹ ವಿಚಾರಗಳು ವಿಶಾದವನ್ನು ಉಂಟು ಮಾಡಿದರೂ ಸಹ ಬದುಕಿನ ವಿಭಿನ್ನ ಮುಖಗಳು ಇರುವುದು ಕಂಡುಬರುತ್ತದೆ. ಕಪ್ಪು ಕತ್ತಕಲೆಯ ನೆರಳಿನಲ್ಲಿ ಬದುಕಿನ ಉತ್ಸಾಹವನ್ನು ಕಳೆಯುತ್ತಿದ್ದಾರೆ. ಹೆಣ್ಣಿನ ಬದುಕು ಯಾವ ಯಾವ ದಿಕ್ಕಿನಿಂದ ಅಪಾಯಕ್ಕೆ ಸಿಲುಕತ್ತದೆ ಎನ್ನುವಂತಹ ಸೂಕ್ಷ್ಮಗಳನ್ನು ಈ ಅಧ್ಯಾಯನದಲ್ಲಿ ನಾನು ಪರಿಶೀಲಿಸಿದದೆನೆ / ಸಂಶೋಧಿಸಿದ್ದೇನೆ.

ಬೆಳಕಿನಲ್ಲಿ ಒಂದು ರೀತಿಯ ವೇಶ / ಮುಖವಾಡವಾದರೆ, ಸಂಜೆ, ರಾತ್ರಿವೇಳೆಯಲ್ಲಿ ಅವರ ಬದುಕಿನ ನಿಜವಾದ ವಾಸ್ತವದ ದರ್ಶನವಾಗುತ್ತದೆ. ನರಕ, ನೋವು, ಹಿಂಸೆ, ಯಾತನೆಯಿಂದ ಕೂಡಿದರುತ್ತದೆ. ಆದರೂ ಸಹ ಈ ವೃತ್ತಿ ಅನಿವಾರ್ಯತೆಯನ್ನು ಸಹ ಸೂಚಿಸುತ್ತಿದೆ. ಅಂದರೆ, ಮಹಿಳೆಗೆ ಎಲ್ಲ ದಾರಿಗಳು ಮುಗಿದ ನಂತರವೇ ಈ ಕೊನೆಯ ದಾರಿಯನ್ನು ಹಿಡಿಯುವಂತಹ ಸ್ಥಿತಿಯನ್ನು ಕಾಣಬಹುದು.

ಸಮಾಜದಲ್ಲಿ ಇಂತಹ ಜನರಿಗೆ ಸಿಗುವಂತಹ ಸ್ಥಾನ–ಮಾನ ಗೌರವಗಳು, ಈಕೆಯನ್ನು ಕೀಳಾಗಿ ಕಾಣುವ, ಮನೋಭಾವವಿರುವುದನ್ನು ಈ ಕತೆಯ ಅಬ್ಬಾಸ್‌ನಲ್ಲಿ ಕಾಣಬಹುದು. ಅಂದರೆ ಅಬ್ಬಾಸ್ ಈ ಕತೆಯಲ್ಲಿ ಸಮಸ್ಯೆಯ ಒಂದು ಮುಖವನ್ನು ಮಾತ್ರ ಹೇಳಿದರೆ, ಇಂತಹ ಅನೇಕ ಸಾವಿರ ಸಮಸ್ಯೆಗಳ ಮುಖವಿರುವುದು ತಿಳಿದುಬರುತ್ತದೆ. ಹೆಣ್ಣನ್ನು ಒಂದು ಭೋಗದ ವಸ್ತುವನ್ನಾಗಿ ಮಾತ್ರ ಕಾಣುವಂತಹ ಪರಿಸ್ಥಿತಿ ಈ ಸಮಾಜದ ದೃಷ್ಟಿಯಾಗಿದೆ. ಸಕಲವನ್ನು ಪೂರೈಸುವ ಯಂತ್ರವಾಗಿಯೇ ಹೆಣ್ಣನ್ನು ನೋಡುತ್ತಿದ್ದಾರೆಯೇ ವಿನಾ ಅವಳ ಮನಸ್ಸನ್ನು ಅರ್ಥೈಸುವಂತಹ ವ್ಯವದಾನವಾಗಲೀ, ಮನಸ್ಸಾಗಲೀ ಅಂತಹ ಮಾನವೀಯ ಪರ ಆಲೋಚನೆಯ ಭಾವನೆಗಳನ್ನೇ ಕಳೆದುಕೊಂಡು ಬದುಕುತ್ತಿರುವ ಸಮಾಜವನ್ನು ಕಾಣುತ್ತಿದ್ದೇವೆ. ಸ್ತ್ರೀ ಸಂವೇದನೆಯ ಅಧ್ಯಯನದಡಿಯಲ್ಲಿ ಕಂಡುಬರುವಂತಹ ವಿಚಾರದಬಗ್ಗೆ ನನ್ನ ವಿಚಾರವನ್ನು ಸಂಶೋಧಿಸಿದ್ದೆನೆ.

"ಶಬ್ದಗಳು" ಎನ್ನುವಂತಹ ಕತೆಯಲ್ಲಿಯೂ ಕೂಡ ಇಂತದ್ದೇ ಸಮಸ್ಯೆಯನ್ನು ಎದುರಿಸುತ್ತಿರುವ ಪಾತ್ರ ಕಂಡು ಬರುತ್ತದೆ.

ಆದರೆ, ಈ ಕತೆಯಲ್ಲಿ ಹೆಣ್ಣಿನ ವೇಶವನ್ನು ಹಾಕಿಕೊಂಡು ಹೆಣ್ಣು ಕುಲಕ್ಕೇ ಅವಮಾನ ಗೊಳಿಸುವಂತಹ ಒಬ್ಬ ಪುರಷನು ಈ ಕತೆಯಲ್ಲಿ ಕಂಡುಬರುತ್ತಾನೆ. ಅಂದರೆ ಗಂಡುಸೂಳೆ. ಎಂದುಕತೆಯಲ್ಲಿ ವಿಡಂಬಿಸಿದ್ದಾರೆ. ಇವನು ಎಲ್ಲರಿಗೂ ಮೋಸಗೊಳಿಸುವಂತ ಸ್ಥಿತಿಯಲ್ಲಿ ಅವನ ಪಾತ್ರ ಚಿತ್ರಣವಾಗಿರುವುದು ಕಂಡುಬರುತ್ತದೆ. ತನ್ನ ಅನುಕೂಲಕ್ಕೆ ತಕ್ಕಂತೆ ಹೆಣ್ಣಿನ ವೇಶವನ್ನು ಧರಿಸುವಂತಹ ಪರಿಕಲ್ಪನೆಯನ್ನು ಈ ಕತೆಯಲ್ಲಿ ಕಾಣಬಹುದು. ಹೆಣ್ಣಿನ ದೇಹ ರಚನೆಯಂತೆ ಬಟ್ಟೆ ಬರೆಯನ್ನು ತೊಡುವುದು ವರ್ತಿಸುವುದು, ಅಲಂಕಾರಮಾಡಿಕೊಳ್ಳುವುದು, ಹೆಣ್ಣಿಗೆ ಮಾಡುವಂತಹ ಅವಮಾನ ಹಾಗೂ ಅಗೌರವವನ್ನು ಸೂಚಿಸುವಂತೆ. ಹೆಣ್ಣಿನ ಹಾಗೆ ಇವನ್ಯಾಕೆ ಇತರರಿಗೆ ಮೋಸಮಾಡುತ್ತಾನೆ? ಎನ್ನುವುದು ನಮ್ಮನ್ನು ಕಾಡುತ್ತದೆ.

ಈ ಕತೆಯ ಮೂಲಕ ಹೆಣ್ಣಿನ ಸ್ಥಿತಿ ಎಷ್ಟು ಅತಂತ್ರ ಹಾಗೂ ಅಪಾಯ ಮತ್ತು ಇಂದು ಯಾವ ರೀತಿಇದೆ? ಎನ್ನುವಂತಹ ಪ್ರಶ್ನೆ ನಮ್ಮೆಲ್ಲರನ್ನು ಕಾಡುತ್ತದೆ. ಒಬ್ಬ ಪುರುಷ ತಾನು ಸ್ತ್ರೀವೇಶವನ್ನು ಹಾಕಿಕೊಂಡಾಗ ಅನುಭವಿಸುವಂತಹ ಅವಾಂತರಗಳನ್ನು ಲೆಕ್ಕಾಚಾರ ಹಾಕಿದರೆ, ಇಂದು ಮಹಿಳೆಯು ಯಾವ ಸ್ಥಿತಿಯಲ್ಲಿದ್ದಾಳೆ.ಎನ್ನುವ ಸ್ಪಷ್ಟಚಿತ್ರಣ ಈ ಕತೆಯಲ್ಲಿ ಕಂಡುಬರುತ್ತದೆ. ಅವಳ ಸ್ಥಾನಮಾನ ಈ ಸಮಾಜದಲ್ಲಿ ಎಂತಹದ್ದೆಂದು ತಿಳಿದುಕೊಳ್ಳುವುದಕ್ಕೆ ಈ ಕತೆಯು ಉತ್ತಮ ಉದಾಹರಣೆಯಾಗಿ ನಮಗೆ ಕಂಡುಬರುತ್ತದೆ. ಇಂತಹ ಅವಮಾನಗಳನ್ನು ಮಹಿಳೆ ಪ್ರತಿ ದಿನಾವೂ, ಪ್ರತಿಕ್ಷಣವೂ ನೋವಿನಿಂದಲೇ ಕಳೆಯಬೇಕಾಗುತ್ತದೆ. ಹೆಣ್ಣಿನ ಸಾಮಾಜಿಕ ಸ್ಥಾನ, ಮಾನ, ಆರ್ಥಿಕ ಸ್ಥಿತಿಗತಿ, ಅವಲಂಬನಾ ಜೀವನ, ಕೌಟುಂಬಿಕ ಜವಾಬ್ದಾರಿಗಳಿಂದ ನೊಂದು, ಬೇಸತ್ತು ಆಕೆ ಕೊನೆಯ ದಾರಿನ್ನು ಹುಡುಕುವಂತಹ ಪ್ರಯತ್ನವೇ ಈ ವೇಶ್ಯಾವಾಟಿಕೆಯಾಗಿದೆ. ಹೀಗೆ ಹೆಣ್ಣು ಇವತ್ತು ಅವನುಭವಿಸುತ್ತಿರುವ ಅನೇಕ ತರದ ಹಿಂಸೆ, ತಳಮಳ, ಆತಂಕಗಳ ಬಗ್ಗೆ ಈ ಕತೆಗಳ ಮೂಲಕ ನಮ್ಮನ್ನು ಎಚ್ಚರಿಸುವಂತ ಕೆಲಸವು ಸ್ತ್ರೀ ಸಂವೇದನೆಯ ನೆಲೆಗಳು ಎಂಬ ಅಧ್ಯಯನದ ಮೂಲಕ ನಾನು ಸಂಶೋಧಿಸುವ ಕಾರ್ಯವನ್ನು ಮಾಡಿದೇನೆ.

**ಕೊನೆಟಿಪ್ಪಣಿ:**

*1. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾಚಳುವಳಿ ಪುಟ ಸಂಖ್ಯೆ=30

*2. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾಚಳುವಳಿ ಪುಟ ಸಂಖ್ಯೆ=31

*3. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು (ಪುಟ 40–41)

**4**. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನದ ಒಂದು ಪ್ರವೇಶಿಕೆ (ಪುಟ 34–35)

*5. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು (ಪುಟ 42)

*6. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು (ಪುಟ 51)

*7. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು (ಪುಟ 71)

*8. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು (ಪುಟ 73)

*9. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು (ಪುಟ 92)

*10. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು (ಪುಟ 103)

*11. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು (ಪುಟ 104)

*15. (ವೈಕಂ ಕತೆಗಳು ಪುಟ 144)

*12. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನದ ಒಂದು ಪ್ರವೇಶಿಕೆ (ಪುಟ 92–93, 103)

*13. ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಚಳುವಳಿಗಳು (ಪುಟ 71)

14. ವೈಕಂ ಕಥೆಗಳು ಪುಟ–09

15.ವೈಕಂ ಕತೆಗಳು ಪುಟ 144

## ಅಧ್ಯಾಯ: 3

## ವೈಕಂ ಮಹಮ್ಮದ್ ಬಷೀರ್ ರವರ ಕತೆಗಳಲ್ಲಿ ಮಾನವೀಯ ಮೌಲ್ಯಗಳ ಅನಾವರಣ ಹಾಗೂ ಧಾರ್ಮಿಕ ಸಂಘರ್ಷದ ನೆಲೆಗಳು:-

### ಮಾನವೀಯ ಮೌಲ್ಯಗಳ ಅನಾವರಣ:-

ಮಾನವೀಯ ಸಂಬಂಧಗಳ ಸ್ವರೂಪದ ಗ್ರಹಿಕೆಯು ಯಾವ ಸನ್ನಿವೇಶದಲ್ಲಿಯೇ ಆಗಲಿ ಅರ್ಥಪೂರ್ಣವಾಗುವುದು, ಮುಖ್ಯವಾಗಿ ಸಾಮಾಜಿಕ ಸಂದರ್ಭಗಳಲ್ಲಿಯೇ ಸಾಮಾಜಿಕವಾಗಿ ಅರ್ಥಪೂರ್ಣವಾಗುವ, ಇಂಥ ಸಂಬಂದಗಳೇ ವಾಸ್ತವವಾಗಿ ಸಾಂಸ್ಕೃತಿಕ ಆಯಾಮಗಳನ್ನೇ, ಹೊರಚಾಚುಗಳನ್ನು ಬಿಟ್ಟುಕೊಡುತ್ತವೆ.

ಕತೆಗಳಲ್ಲಿ ಮಾನವೀಯ ಸಂಬಂಧದ ಸ್ವರೂಪವನ್ನು ಗ್ರಹಿಸುವುದು ಎಂದರೆ, ಇಂಥ ಸಂಬಂದಗಳ ಸಾಮಾಜಿಕ ಸ್ವರೂಪವೆಂಥದ್ದು ಎಂದು ಗುರುತಿಸುವುದು ಮುಖ್ಯವೆಂದು ನನ್ನ ನಂಬಿಕೆ. ಕತೆಯ ಅನುಭವದ ಒಡಲಾಳದಿಂದಲೇ ಇಂಥ ಸ್ವರೂಪವನ್ನೇ ಗುರುತಿಸಬೇಕಾದದು- ಬಹಳ ಮುಖ್ಯವಾದ ಕ್ರಿಯೆಯಾಗುತ್ತದೆ. ಏಕೆಂದರೆ ಕತೆಯಲ್ಲಿನ ಅನುಭವ ಬಂಧನದ ಆಚೆಯೂ ಲೇಖಕನ ಉಕ್ತಿಗಳಾಗಿ ಅಥವಾ ಆಶಯಗಳಾಗಿ ಬಂದಿರಬಹುದಾದ ಹಲವು ಧೋರಣೆಗಳು ಕತೆಯ ಸ್ವರೂಪವನ್ನು ನಿರ್ದೇಶಿಸುವ ಕೆಲಸವನ್ನು ಅನೇಕ ಬಾರಿ ಮಾಡುವುದುಂಟು ಇವುಗಳನ್ನು ಗುರುತಿಸಿ ವಿಶ್ಲೇಷಿಸುವ ಕಾರ್ಯಮಾಡುವುದು ಇನ್ನೊಂದು ನೆಲೆಯ ಕೆಲಸ

ನವೋದಯದ ಸಾಹಿತ್ಯ ಪ್ರಕಾರದಲ್ಲಿ ಈ ಬಗೆಯ ಸಾಹಿತ್ಯಕ ಬರವಣಿಗೆಯ ಧಾಟಿ ಅಲ್ಲಲ್ಲಿ ಪ್ರಧಾನವಾಗಿದೆ ಇದಕ್ಕೆ ಕಾರಣಗಳು ಇಲ್ಲದಿಲ್ಲ. ಕನ್ನಡದ ನವೋದಯ ಒಂದು ರೀತಿಯಲ್ಲಿ ಸಾಂಸ್ಕೃತಿಕ ಪುನರುಜ್ಜೀವನದ ಕಾಲ ಜೀವನ ಮೌಲ್ಯದ ಅನ್ವೇಷಣೆಯ ಕಾಲವೂ ಇದಾದಂತೆ, ಕೆಲವು ಜೀವನಾದರ್ಶಗಳನ್ನು ಸಾರ್ವಕಾಲಿಕ ಎನ್ನಬಹುದಾದ ಜೀವನದಲ್ಲಿ ತೊಡಗಿಸಿಕೊಳ್ಳಬೇಕು ಎನ್ನುವ ನೈತಿಕ ಒತ್ತಾಯವನ್ನು ಹೇರುವಂಥದ್ದು ಆಗಿತ್ತು.

ಹೀಗಾಗಿ ಲೇಖಕನ ನೋಟಗಳು, ಕಾಣ್ಕೆಗಳು, ಆಶಯಗಳು ಕತೆಗಳ ಜೀವನಾನುಭವದಲ್ಲಿ ಅಲ್ಲಲ್ಲಿ ಒಳಹೊಗುವ ಪ್ರಯತ್ನ ಮಾಡುತ್ತವೆ ಅಥವಾ ಅವುಗಳಿಗೆ ಪ್ರತಿಕ್ರಿಯೆಯನ್ನು ತೋರುವ ಕೆಲಸ ಮಾಡುತ್ತವೆ.

ಈ ಹಿನ್ನೆಲೆಯಲ್ಲಿಯೇ ವೈಕಂ ಮಹಮ್ಮದ್ ಬಷೀರ್ ಕತೆಗಳಲ್ಲಿ ಸದಾ ಮಾನವೀಯತೆಯ ಪರ ಒಲವಿದ್ದಂತಹ ವ್ಯಕ್ತಿ ಸ್ಥಿತಿ ಪ್ರಜ್ಞೆಯಿಂದ ಅರಿವಿನ ಸಮಾಜದ ವಾಸ್ತವದ ನಗ್ನ ಸತ್ಯವನ್ನು ಪ್ರತಿಬಿಂಬಿಸುವ ಕತೆಗಳಲ್ಲಿ ಇವರು ರಚಿಸಿದ್ದಾರೆ ಇವರ ಸಾಹಿತ್ಯವು ಜೀವಪರವಾಗಿದ್ದು, ಮಾನವೀಯ

ಮೌಲ್ಯಗಳನ್ನು ಒಳಗೊಂಡಿದ್ದು ತಿಳಿದು ಬರುತ್ತದೆ. ಈ ಹಿನ್ನಲೆಯಲ್ಲಿ ನನ್ನ ಅಧ್ಯಯನವು ಮುಂದುವರೆಯುತ್ತದೆ. ಹುಸಿಮಾನವೀಯತೆಯನ್ನು ಕಳ್ಳನಲ್ಲಿ ಕಾಣಬಹುದು. "ಹೀಗೊಬ್ಬ ಮನುಷ್ಯ" ಕತೆಯಲ್ಲಿ ಮಾನವೀಯತೆ ಮತ್ತು ಅಮಾನವೀಯ ವರ್ತನೆಗಳನ್ನು ಕಾಣಬಹುದಾಗಿದೆ, ಅವುಗಳ ವಿವರ ಈ ಮುಂದಿನಂತಿದೆ ಪರ್ವತ ಶ್ರೇಣಿಯ ತಪ್ಪಲಿನಲ್ಲಿರುವ ಒಂದು ಮಹಾನಗರ ಅಲ್ಲಿರುವವರಿಗೆ ಮನುಷ್ಯತ್ವ, ಮಾನವೀಯತೆ, ಕರುಣೆ ಪದಗಳಿಗೆ ಅರ್ಥವೇ ಇಲ್ಲದೆ ಇದ್ದರು ಅಂತಹ ಪರಿಸ್ಥಿತಿಯಲ್ಲಿ ಒಬ್ಬ ಅಪರಿಚಿತನೊಬ್ಬ ಆ ಸ್ಥಳಕ್ಕೆ ಭಾಷೆ ಗೊತ್ತಿಲ್ಲದೆ ಅಲ್ಲಿ ಕೆಲಸವನ್ನು ಹರಸುತ್ತಾ ಹೋಗುತ್ತಾನೆ ಆಗ ಆತನಿಗೆ ಎದುರಾದಂತಹ ಸಮಸ್ಯೆಗಳನ್ನು ಕುರಿತು ಈ ಕತೆಂಯು ಧನಿ ಎತ್ತುತ್ತದೆ ಕತೆಯ ಪರಿಧಿಯಲ್ಲಿ ಸಾಗಿ ಕಳ್ಳನೊಬ್ಬ ತನ್ನ ತಪ್ಪಿಗೆ ಪ್ರಾಯಶ್ಚಿತವಾಗಿ ಕದ್ದ ವ್ಯಕ್ತಿಗೆ ಅಪರಿಚಿತನಾದ ಶಿಕ್ಷಕನಿಗೆ ಸಹಾಯ ಮಾಡುವುದು ಒಂದು ರೀತಿಯ ಸಹಾಯವಾಗುತ್ತದೆ. *1

ಇಲ್ಲಿ ಹಣದ ಪ್ರಾಮುಖ್ಯತೆ ಹೆಚ್ಚಾಯಿತೇ ವಿನ ಅಲ್ಲಿ ಮಾನವೀಯತೆಗೆ ಬೆಲೆ ಸಿಗಲಿಲ್ಲ ದಯೆ, ಕರುಣೆ, ಅನುಕಂಪಗಳಿಗೆ ಆ ಮಹಾನಗರದಲ್ಲಿ ಬೆಲೆಯೇ ಇರಲಿಲ್ಲ ಆ ಶಿಕ್ಷಕನ ಮನಸ್ಥಿತಿ, ಪರಿಸ್ಥಿತಿಯ ಬಗ್ಗೆ ಯಾರೂ ಸಹ ಕಾಳಜಿವಹಿಸಲಿಲ್ಲ ಈ ಶಿಕ್ಷಕನನಿಗೆ ಆಗುತ್ತಿದ್ದಂತಹ ಅವಮಾನವನ್ನು ನೋಡುತ್ತಾ ವಿನೋದಿಸುತ್ತಾ ಕೇಕೆ ಹೊಡೆಯುತ್ತಿದ್ದವರೇ ವಿನ ಆತನಿಗೆ ಸಹಾನುಭೂತಿಯನ್ನು ತೋರಿಸಿ ಆತನೂ ನಮ್ಮಂತೆ ಒಬ್ಬ ಮನುಷ್ಯ ವರ್ಗಕ್ಕೆ ಸೇರಿದವನು ಎಂಬಂತಹ ವಿಚಾರವನ್ನು ಮರೆತು, ಅವನ ಕಣ್ಣುಗಳನ್ನು ಕೀಳುವಂತಹ ಹೀನ ಕೃತ್ಯಕ್ಕೆ ಮುಂದಾಗುವಂತದ್ದು ಈ ಕತೆಯಲ್ಲಿ ಕಂಡುಬರುವಂತಹ ಅಮಾನವೀಯ ಅಂಶವಾಗಿ ಕಂಡುಬರುತ್ತದೆ. ಆಪತ್ಬಾಂಧವನಾಗಿ ಕಂಡುಬರುತ್ತಾನೆ.

ಆದರೆ ಈ ಸಹಾಯದಲ್ಲೂ ಸ್ವಾರ್ಥ ಅಡಗಿದೆ ಎನ್ನುವಂತಹ ವಿಚಾರ ಮನಗಾಣ ಬೇಕಾಗುತ್ತದೆ ಏಕೆಂದರೆ, ಈ ಶಿಕ್ಷಕನ ಪರ್ಸ್ಸನ್ನು ಕದ್ದಿದ್ದವನು ಆ ಅಪರಿಚಿತ ವ್ಯಕ್ತಿಯೇ ಆಗಿರುತ್ತನೆ ಇದು ಕತೆಯ ಕೊನೆ ಸಾಲಿನಲ್ಲಿ ಮಾತ್ರ ಕಂಡುಬರುತ್ತದೆ ಅಲ್ಲಿಯವರೆಗೂ ಆ ಬಡಪಾಯಿ ಶಿಕ್ಷಕನ ಪಾಲಿಗೆ ಈ ಮನುಷ್ಯ ದೇವರೇ ಕಳುಹಿಸಿರುವಂತಹ ವ್ಯಕ್ತಿಯಾಗಿ ಕಂಡುಬರುತ್ತಾನೆ ಕಳ್ಳನೇ ತಾನು ಕದ್ದಿರುವಂತಹ ಸನ್ನಿವೇಶವು ಬಹಳ ಅಪರೂಪದ, ಹಾಗೂ ಇಂದಿನ ವಾಸ್ತವದ ಸತ್ಯಕ್ಕೆ ನಿಲುಕದಂತೆ ನನಗೆ ಕಂಡುಬರುತ್ತದೆ ಅಥವಾ ವಾಸ್ತವದ ಅಪರೂಪದ ಸನ್ನಿವೇಶವಾಗಿದೆ ಎನ್ನಬಹುದು .

ಮೂಲತಃ ಒಬ್ಬ ಕಳ್ಳನು ಬದಲಾಗುವುದು ಅವನಲ್ಲಿಯೂ ಕೂಡ ಕರುಣೆ, ಅನುಕಂಪ ಹುಟ್ಟುವಂತಹದ್ದು, ಮಾನವೀಯತೆಯ ಚೌಕಟ್ಟಿನಲ್ಲಿ ಇವನನ್ನು ಇಟ್ಟು ನೋಡುವಂತಹ ಸ್ಥಾನ ಉಳಿಸಿಕೊಳ್ಳುವುದನ್ನು ಈ ಕತೆಯ ಅಧ್ಯಯನದಿಂದ ತಿಳಿದುಬರುತ್ತದೆ ಅಂದರೆ, ಕ್ರೂರತ್ವದಲ್ಲಿಯೂ ಸಹ ಮಾನವೀಯತೆ ನೆಲೆಯೂರಿದೆ ಎನ್ನುವುದಕ್ಕೆ ಈ ಕತೆಯೇ ಪ್ರಮುಖ ಸಾಕ್ಷಿಯಾಗಿ ನಮಗೆ ಕಂಡುಬರುತ್ತದೆ.

ಈ ಕತೆಯನ್ನು ಇಂದಿನ ವಾಸ್ತವ ಜಗತ್ತಿಗೆ ಒಳಗುಮಾಡುವಂತಹದ್ದಕ್ಕೆ ಕಷ್ಟ ಎನಿಸಬಹುದು ಇಂದಿನ ಭ್ರಷ್ಟತೆ, ಅರಾಜಕತೆ, ಮಾನವೀಯ ಮೌಲ್ಯವು ಕುಸಿಯುತ್ತಿರುವ ದಿನಗಳಿಗೆ ಬಹಳ ದೂರದಲ್ಲಿ ನಿಲ್ಲುವಂತಹ ಕತೆಯಾಗಿದೆ ಕತೆಯ ಕೊನೆಯ ಸಾಲು ದೇವರು ನಿಮ್ಮನ್ನು ನಮ್ಮನ್ನು ಎಲ್ಲರನ್ನು ಕಾಪಾಡಲಿ ಎಂಬ ಸಾಲು ಅಸಹಾಯಕತೆಯಿಂದ ನಲುಗಿದ ಮುಗ್ಧಶಿಕ್ಷಕನೊಬ್ಬನ ನೊಬ್ಬನ ಕಳಕಳಿಯ ಮಾತಾಗಿದೆ.

ಆ ಶಿಕ್ಷಕನ ವಸ್ತ್ರವನ್ನೆಲ್ಲಾ ಬಿಚ್ಚಿಸುತ್ತಾ ಮಜಾನೋಡಿ ವಿನೋದಿಸುವಂತಹ ಕಟುಕ ಮನಸ್ಥಿತಿಯಿದ್ದವರು ಮಾನವೀಯ ಗುಣಗಳಂದ ದೂರವಾಗಿದ್ದಾರೆ.ಅಲ್ಲದೆ ಅವನನ್ನೆ ವೈರಿಯೂ ಶತ್ರುವಿನ ರೀತಿ ಕಾಣುತ್ತಿದ್ದಾನೆ. ಮಜಾ ನೋಡಿ ವಿನೋದಿಸುವಂತಹ ಕಟುಕ ಮನಸ್ಥಿತಿಯವರಾಗಿದ್ದರು ಮನುಷ್ಯ ಮನುಷ್ಯನನ್ನೆ ಪ್ರೀತಿಸುವ ಗೌರವಿಸುವ, ಆರಾದಿಸುವ ಮನಸ್ಥಿತಿಯಿಂದ ದೂರವಾಗಿದ್ದರೆ ಅವನನ್ನೆ ವೈರಿಯ ಶತ್ರುವಿನ ರೀತಿ ಕಾಣುತ್ತಿದ್ದಾನೆ.

ಆ ಮಹಾನಗರದ ಜನರು ಕಳ್ಳತನ, ಕೊಲೆಮಾಡುವುದರಲ್ಲಿ ಬಹಳ ನೈಪುಣ್ಯತೆಯನ್ನು ಹೊಂದಿದವರಾಗಿದ್ದಾರೆ ಈ ಶಿಕ್ಷಕನು ಹೋಟೆಲಿನಲ್ಲಿ ಹಣ ಕೊಡಲು ಆಗದೆ, ಈ ರೀತಿಯ ಸಂಕಟಕ್ಕೆ ಸಿಲುಕುತ್ತಾನೆ ಅಲ್ಲಿನ ಜನರು ಪ್ರಾಮಾಣಿಕತೆ, ಸತ್ಯ, ನ್ಯಾಯ, ನಿಷ್ಟೆ ಇವುಗಳಗೆ ಬೆಲೆಯೇ ಇಲ್ಲದಂತೆ ವರ್ತಿಸುತ್ತಿದ್ದರು.

ಸಂಕಷ್ಟದಲ್ಲಿರುವವರಿಗೆ ನೆರವಾಗುವುದನ್ನು ಬಿಟ್ಟು ಅವರನ್ನು ಗೇಲಿ ಮಾಡುವಂತಹ ಸ್ಥಿತಿಯನ್ನು ಕಾಣಬಹುದು ಮನುಷ್ಯ ಧರ್ಮೀಯ ನೆಲೆಯಲ್ಲಿ ಯೋಚಿಸುವುದನ್ನೇ ಮರೆತುಬಿಟ್ಟಿದ್ದಾರೆ ಎನ್ನುವಂತಹ ವಿಚಾರಗಳನ್ನು ನನ್ನ ಅಧ್ಯಯನದಲ್ಲಿ ಪರಿಶೀಲಿಸಿ ಒಳಪಡಿಸಿದ್ದೇನೆ. ಈ ಕತೆಯಲ್ಲಿ ಮತ್ತೊಂದು ವಿಭಿನ್ನತೆಯನ್ನು ಗುರುತಿಸುವುದಾದರೆ, ಪರಿಚಯವೇ ಇಲ್ಲದೆ ಇರುವಂತಹ ವ್ಯಕ್ತಿ ಬಂದು ಅವಮಾನಕ್ಕೆ ಒಳಗಾಗಿದ್ದ ಈ ಶಿಕ್ಷಕನಿಗೆ ಸಹಾಯಮಾಡುವಂತದ್ದು ಈ ಕತೆಯಲ್ಲಿ ಮತ್ತೋಂದು ಕುತೂಹಲವನ್ನು ಕಾಯ್ದಿರಿಸುತ್ತದೆ.

ಅಪರಿಚಿತ ವ್ಯಕ್ತಿಗಿರುವಂತಹ ಹುಸಿ ಮಾನವೀಯ ಗುಣದ ಮುಖವಾಡ ಅಲ್ಲಿನ ಜನರಿಗೆ ಅದು ಗೊತ್ತಾಗಲಿಲ್ಲ. ಈ ಅಪರಿಚಿತನೇ ನಿಜವಾದ ಕಳ್ಳನಾಗಿರುತ್ತಾನೆ ಆದರೆ ,ಸರಿಯಾದ ಸಮಯಕ್ಕೆ ಇವನ ಆಗಮನದಿಂದ ಮುಂದೆ ನಡೆಯುತ್ತಿದ್ದಂತಹ ನಿರ್ ವಸ್ತ್ರೀಕರಣದ ಕ್ರಿಯೆ ನಡೆಯುವುದನ್ನು ತಡೆದು ಎಲ್ಲರ ಪಾಲಿಗೆ ಇವನು ಉತ್ತಮ ವ್ಯಕ್ತಿಯಾದನು ಈ ಶಿಕ್ಷಕನನ್ನು ಕಾಪಾಡಿ, ಮಾರ್ಯಾದೆಯನ್ನು ಉಳಿಸುವುದರಿಂದ ಇವನು ಮೇಲ್ನೋಟಕ್ಕೆ ಒಳ್ಳೆಯವನಂತೆ ಕಾಣಬಹುದು.

"ಜನ್ಮ ದಿನ" ಎಂಬ ಕತೆಯಲ್ಲಿ ಹಸಿವಿನಿಂದ ಬಳಲುವಂತಹ ಸ್ಥಿತಿಯನ್ನು ಕಾಣಬಹುದು ಹಸಿದವನಿಗೆ ಅನ್ನ ಕೊಡದೆ ಕ್ರೂರಿಗಳ ಹಾಗೆ ವರ್ತಿಸುವಂತಹ ಚಿತ್ರಣವನ್ನು ಈ ಕತೆಯಲ್ಲಿ ಅಡಕವಾಗಿದೆ.

ಮನುಷ್ಯನ ಕಷ್ಟಕ್ಕೆ ಮನುಷ್ಯನೇ ನೆರವಾಗದೆ ದೂರ ಸರಿಯುವಂತಹ ಕಾಲವಾಗಿದೆ ಮನುಷ್ಯನಿಗೆ ಮನುಷ್ಯನೇ ಶತ್ರು ಎನ್ನುವ ಸತ್ಯವು ಈ ಕತೆಯಲ್ಲಿ ಬಿಂಬಿತವಾಗಿದೆ

ಎಲ್ಲ ಮನುಷ್ಯರ ಜೀವನದಲ್ಲಿ "ಜನ್ಮದಿನ" ಎನ್ನುವಂತದ್ದು ಒಂದು ವಿಶೇಷತೆಯನ್ನು ಸೂಚಿಸುವ ಸುದಿನವಾಗಿ ಕಂಡುಬರುತ್ತದೆ ಆದರೆ, ಈ ಕತೆಯಲ್ಲಿ ಜನ್ಮದಿನದಂದೇ ಹಸಿವಿನ ಬೇಗೆ ಸಹಿಸಲಾಗದ ಸ್ಥಿತಿ ಆ ದಿನ ಈ ಲೇಖಕನಿಗೆ ಎಲ್ಲಿಯೂ ಸಹ ಕಾಫಿ, ತಿಂಡಿ. ಊಟವೂ ಸಿಗದೆ ತನ್ನ ಬಗ್ಗೆ ತನಗೇ ಅಸಹ್ಯ ಹುಟ್ಟಿಸುವಂತಾಗುತ್ತದೆ. *2

ಉಳ್ಳವರು ತಮಗೆ ಬೇಕಾದಂತಹ ವಿವಿಧ ಬಗೆಯ ಭಕ್ಷಭೋಜನವನ್ನು ಮಾಡಿ ತಿನ್ನುತ್ತಾರೆ ಆದರೆ ಬೆಳಿಗ್ಗೆಯಿಂದ ಹಸಿದೂ-ಹಸಿದು ಬಳಲಿದ್ದ ಈ ವ್ಯಕ್ತಿಯ ಬಗ್ಗೆ ಯಾರೂ ಕನಿಕರ ವ್ಯಕ್ತ ಪಡಿಸುವುದಿಲ್ಲ ಹಸಿದವನಿಗೇ ಗೊತ್ತು ಹಸಿವಿನ ಸಂಕಟ ಇವನ ಸ್ನೇಹಿತರು, ಪರಿಚಯಸ್ಥರು ಇವನ ಮುಖ ನೋಡಲು ನಿರಾಕರಿಸುತ್ತಿದ್ದರು. ಇವನದು ಏನಾದರೂಂದು ಸಮಸ್ಯೆ ಇದ್ದೆ ಇರುತ್ತದೆ ಎಂಬ ಭಾವ ಆ ಬಡಪಾಯಿಯ ಕಷ್ಟವನ್ನು ಕೇಳುವ ಮನಸ್ಸೇ ಅಲ್ಲಿ ಇರಲಿಲ್ಲ ಈ ಕತೆಯು ಕನ್ನಡದ 'ಆಸ್ಫೋಟ' ಎಂಬ ನಾಟಕವನ್ನು ನೆನಪಿಸುತ್ತದೆ.

ಕೊನೆಯಲ್ಲಿ ರಾತ್ರಿಯ ಸಮಯದಲ್ಲಿ ಪಕ್ಕದ ಮನೆಯಿಂದ ಊಟವನ್ನು ಕದ್ದು ತಿನ್ನುವಂತಹ ಘಟನೆ ನಡೆಯುತ್ತದೆ ಹಸಿವನ್ನು ನೀಗಿಸಿಕೊಳ್ಳುವುದಕ್ಕೆ ಮಾಡುವ ಶತಪ್ರಯತ್ನಗಳು ಹಸಿದವನಿಗೆ ಒಂದು ತುತ್ತು ಅನ್ನ ಕೊಡುವ ಮನಸ್ಸಿನವರು ಯಾರೂ ಸಿಗುವುದಿಲ್ಲ " ಮ್ಯಾಥ್ಯೂ ನೋಡಿದ ಸಿನಿಮಾದ ಬಗ್ಗೆ ಹೇಳಿ ನೀವು ನೋಡಲೇ ಬೇಕಾದ ಒಳ್ಳೆಯ ಚಿತ್ರ ಎನ್ನುತ್ತಾನೆ" ಅಂದರೆ ಈ ಲೇಖಕನಿಗೆ ಬೇಕಿರುವ ಆಹಾರ, ಹೊಟ್ಟೆ ತುಂಬಿದ ಜನರಿಗೆ ಮೋಜು, ಮನೋರಂಜನೆಯಲ್ಲಿ ಜೀವನ ಕಳೆಯುತ್ತಾರೆ ಕೊನೆಯವರೆಗೂ ಮಾನವೀಯತೆಯಿಂದ ನಡೆದುಕೊಳ್ಳುವಂತಹ ಒಬ್ಬ ಮನುಷ್ಯನೂ ಕೂಡ ಸಿಗುವುದಿಲ್ಲ. ಈ ಕತೆಯಲ್ಲಿ ಸಿಗುವುದಿಲ್ಲ. ರಾತ್ರಿಯೂ ಸಹ ಈ ಲೇಕನಿಗೆ ಊಟಸಿಗುತ್ತಿರಲಿಲ್ಲ ಪರೋಕ್ಷವಾಗಿ ಈ ಮುದುಕ ಪರೋಪಕಾರಿಯ ರೀತಿಯಲ್ಲಿ ಸಹಾಯ ಮಾಡುವುದ್ದನ್ನು ಈ ಕತೆಯಲ್ಲಿ ಕಂಡುಬರುತ್ತದೆ.

'ಬಂಗಾರಿ' ಎಂಬ ಕತೆಯಲ್ಲಿಯೂ ಸಹ ಯಜಮಾನಿಕೆಯನ್ನು ನಡೆಸುತ್ತಿದ್ದಂತ ಕುಟುಂಬ ಸಾಹುಕಾರನ ಕುಟುಂಬದವರಲ್ಲಿ ಮಾನವೀಯತೆ ಬದಲಿಗೆ ಮೃಗೀಯ ವರ್ತನೆಯನ್ನು ತೋರುವುದನ್ನು ಕಾಣಬಹುದು ಊರಿಗೆಉಪಕಾರಿಯಾಗಬೇಕಾದಂತವರು ಊರಿನ ಜನರಿಗೆ, ಬಡವರ ಪಾಲಿಗೆ ಅಪಕಾರಿಯಾಗಬೇಕಾದಂತಹ ಸಾಹುಕಾರನಲ್ಲಿದ್ದ ಮಾನವೀಯತೆಯ ಗುಣ/ಮೌಲ್ಯವು ಅವನ ಮಗನಲ್ಲಿ ಅದು ಕಳೆದು ಹೋಗುತ್ತಿರುವುದು ಗೋಚರಿಸುತ್ತದೆ *3

ನಿರಾಶ್ರಿತವ್ಯಕ್ತಿ, ಅಸಹಾಯಕ, ಅಂಗವೈಕಲ್ಯದಿಂದ ಬಳಲುತ್ತಿರುವಂತಹವನು ರಾತ್ರಿ ಸುರಿಯುವ ಮಳೆಯಿಂದ ಆಶ್ರಯ ಪಡೆಯಲು ಸಾಹುಕಾರನ ಮನೆಬಳಿ ಬಂದಾಗ ಸಾಹುಕಾರನು ಅವನನ್ನು ಕಾಲಿನಿಂದ ಒದ್ದು ಕೋಲಿನಿಂದ ತಿವಿದು ದೂರ ತಳ್ಳಿದನು ಬಡವರನ್ನು ಕಂಡರೆ ಶ್ರೀಮಂತರಲ್ಲಿನ ತಿರಸ್ಕಾರ ಬದಲಾವಣೆಯು ಈ ಕತೆಯಲ್ಲಿ ಕಾಣಬಹುದು.ಮತ್ತು ತುಂಬ ಅವಹೇಳನಕಾರಿಯಾದ ಮಾತನಾಡುವುದನ್ನು ಸಹ ಕಾಣಬಹುದು.

ಈ ಕತೆಯಲ್ಲಿ ಗಮನಿಸಬೇಕಾದದ್ದು ಸಾಹುಕಾರನ ಮಗ ಓದಿದವನು, ತಿಳುವಳಿಕೆ ಇರುವ ವ್ಯಕ್ತಿ ಎಂದು ಜನ ಭಾವಿಸಿದರೆ, ಅವನ ವ್ಯಕ್ತಿತ್ವದಲ್ಲಿ ಮನುಷ್ಯನಿಗೆ ಇರಬೇಕಾದ ಸಹ ಧರ್ಮೀಯತ ಗುಣ ಇವನಲ್ಲಿನ ಕೊರತೆ ಎದ್ದು ಕಾಣುತ್ತದೆ ಪ್ರಪಂಚದ ಜ್ಞಾನ ಅರಿವು ಇರುವಂತ ವ್ಯಕ್ತಿಯಲ್ಲಿಯೇ ನಾವು ಮಾನವೀಯ ಅಂಶ/ ಮೌಲ್ಯಗಳಿಗೆ ಸ್ಥಾನವಿಲ್ಲವೆಂದಾದರೆ, ಇನ್ನು ಸಾಮಾನ್ಯರ ಸ್ಥಿತಿಯ ಬಗ್ಗೆ ಯೋಚಿಸಬೇಕಾಗುತ್ತದೆ. ಕತೆಯಲ್ಲಿನ ಮತ್ತೊಂದು ವಿಭಿನ್ನ ಮುಖವೆಂದರೆ, ಮಾನವೀಯತೆ ಎನ್ನುವಂತದ್ದು ಗುಡಿಸಿಲಿನಲ್ಲಿ ಅರಳದೇ ಅರಮನೆಯಲ್ಲಿ ಅರಳುವುದೆ? ಎಂಬ ಮಾತಿಗೆ ತಕ್ಕಂತೆ ಬಂಗಾರಿ ಎಂಬ ಹುಡುಗಿ ಈ ಅಸಹಾಯಕ ಯುವವೀರನಿಗೆ ಭಿಕ್ಷುಕನಿಗೆ ಆಶ್ರಯವನ್ನು ನೀಡಿ ಅವಳ ಮಾನವೀಯತೆಯ ಮೌಲ್ಯವನ್ನು ಪ್ರತಿನಿಧಿಸುತ್ತಾಳೆ ಊರಿನಿಂದ ಆಚೆ ಗುಡಿಸಿಲಿನಲ್ಲಿ ಬದುಕುತ್ತಿರುವ ಲೋಕಜ್ಞಾನದ ಅರಿವು, ತಿಳುವಳಿಕೆ, ಶಿಕ್ಷಣ ಇಲ್ಲದ ಒಬ್ಬ ಮುಗ್ದೆಯಲ್ಲಿ ಇದ್ದಂತಹ ಔದಾರ್ಯತೆ, ಮಾನವಧರ್ಮಿಯತೆ ಕಂಡುಬರುತ್ತದೆ.

ಮನುಷ್ಯ ಮನುಷ್ಯನನ್ನು ಪ್ರೀತಿಸುವ, ಗೌರವಿಸುವ ಅವನ ನೋವು ಕಷ್ಟಗಳಲ್ಲಿ ಸಹಕರಿಸುವಂತಹ ಭಾವನೆ ಇಲ್ಲದವನಿಗೆ ಮಾನವನಾಗಿ ಹುಟ್ಟಿ ಯಾವ ರೀತಿಯ ಪ್ರಯೋಜನವೂ ಇಲ್ಲದೆ ಇರುವ ರೀತಿಯಲ್ಲಿರುತ್ತಾನೆ ಎಲ್ಲರಿಗೂ ಉತ್ತಮನಾಗಿ ಉಪಯೋಗಕಾರಿಯಾಗಿ ನಡೆದುಕೊಳ್ಳುವುದು ಬಹಳ ಅಪರೂಪದ ಬೆರಳೆಣಿಕೆಯಷ್ಟು ಮಂದಿ ಮಾತ್ರ ಎನ್ನುವುದನ್ನು ನನ್ನ ಅಧ್ಯಯನದಿಂದ ಸಂಶೋಧಿಸಿದ್ದಾನೆ.

"ನೀಲಿ ಕಂದೀಲು" ಈ ಕತೆಯಲ್ಲಿ ಲೇಖಕರು ವಾಸವಾಗಿದ್ದ ಮನೆಯಲ್ಲಿ ಯಾವವುದೋ ದೆವ್ವದ ಕಾಟವಿದೆ ಎಂದು ಊರಿನ ಜನರು ಹೇಳುತ್ತಿದ್ದರು, ಮತ್ತು ಆಕಡೆ ಬರಲು ಹೆದರುತ್ತಿದ್ದರು ಇಂತಹ ಸಂಧರ್ಭದಲ್ಲಿ ಲೇಖಕರು ಆತ್ಮಕ್ಕೂ ಸಹ ಮನುಷ್ಯತ್ವದ ಗುಣವಿದೆ/ಆತ್ಮವನ್ನು ಸಹ ಮಾನವತಾ ನೆಲೆಯಲ್ಲಿ ನೋಡಬೇಕೆಂಬುದನ್ನು ಹೊಸ ವಿಚಾರವೊಂದನ್ನು ತಮ್ಮ ಜೀವನಕ್ಕೆ ಅಳವಡಿಸಿಕೊಂಡಾಗಿನಿಂದ ಆ ಮನೆಯಲ್ಲಿದ್ದ ದೆವ್ವದ ಸಮಸ್ಯೆ ದೂರವಾಗಿ ಉಪಕಾರದ ರೀತಿಯಲ್ಲಿ ಕಾಣಿಸಿಕೊಳ್ಳತ್ತದೆ. *4

ಅಂದರೆ ಆತ್ಮಕ್ಕೂ ಕೂಡ ಒಂದು ವ್ಯಕ್ತಿತ್ವವನ್ನು ಕೊಡುವುದರಲ್ಲಿ ಈ ಕತೆಯ ವ್ಯಕ್ತಿ ಪ್ರಮುಖವಾಗಿ ಕಂಡುಬರುತ್ತಾನೆ. ಅವಳಿಗೆ ಆದ ಅನ್ಯಾಯದ ಪರ ಮರುಗುವುದು, ಅವಳಿಗೂ ಕೂಡ ಮನೆಯಲ್ಲಿ ಅರ್ಧಭಾಗಮಾಡಿ ಕೊಡುವಂತದ್ದು, ಆತ್ಮಕ್ಕೂ ಜೀವ ಪರವಾದ ನೆಲೆಯನ್ನು ಸೃಷ್ಟಿಸುವುದು, ಭಾರ್ಗವಿಯ ಆತ್ಮವು ಅದೂ ಕೂಡ ಮಾನವನ ರೀತಿ ಬದುಕುತ್ತದೆ ಮನೆಯನ್ನು ಎರಡು ಭಾಗಮಾಡುವಂತಹದ್ದು ಅದಕ್ಕೂ ವಾಸಿಸುವ ಹಕ್ಕಿದೆ ಎನ್ನುವುದನ್ನು ಪ್ರತಿಪಾದಿಸಿದರು ಸತ್ತ ಆತ್ಮ ಎಂದು ತಿರಸ್ಕರಿಸದೆ ಅದಕ್ಕೂ ಒಂದು ಮಾನವೀಯಗುಣ/ವ್ಯಕ್ತಿತ್ವವನ್ನು ಸೂಚಿಸುವುದು ಇದರಿಂದ ಲೇಖಕನಲ್ಲಿರುವ ಮಾನವೀಯತೆ ಕಂಡುಬರುತ್ತದೆ.

"ಭಾರ್ಗವಿ" ಎನ್ನುವ ಆತ್ಮದಲ್ಲಿಯೂ ಸಹ ಮಾಡಿದ ಉಪಕಾರವನ್ನು ಸ್ಮರಿಸುವಂತಹ ಗುಣ ಇರುವುದನ್ನು ಕಾಣಬಹುದಾಗಿದೆ. ಒಮ್ಮೆ ಲೇಖಕರ ಮನೆಯಲ್ಲಿ ರಾತ್ರಿ ದೀಪದ ಎಣ್ಣೆ ಮುಗಿದಾಗ ತನ್ನ

ಬ್ಯಾಂಕ್ ಸಹೋಧ್ಯೋಗಿ ಮನೆಯಲ್ಲಿ ಎಣ್ಣೆ ತರುವುದಕ್ಕೆ ಹೋಗಿ ಬರುವಷ್ಟರಲ್ಲಿ ಲೇಖಕರ ಮನೆಯಲ್ಲಿ ನೀಲಿಯಾದಂತಹ ಬೆಳಕು ಎಲ್ಲಕಡೆ ಹರಡಿದೆ, ಇದು ಲೇಖಕರು ಎಲ್ಲಿಯೂ ನೋಡಿರದ ಕೇಳಿರದ ವಾಸ್ತವವಾಗಿತ್ತು ಆ ಹೆಣ್ಣು ಆತ್ಮವು ಲೇಖಕನಿಗೆ ಸಹಾಯ/ಪ್ರತ್ಯೊಪಕಾರವನ್ನು ಮಾಡುವಂತಹ ಮನೋಧರ್ಮವನ್ನು ಈ ಕತೆಯಲ್ಲಿ ವೈಕಂರವರು ಹಿಡಿದಿಟ್ಟಿದ್ದಾರೆ, ಇವರ ಬಹುತೇಕ ಚಿಂತನೆಗಳು ಮಾನವೀಯತೆ ಅಥವಾ ಮಾನವ ಪರವಾದದ್ದಾಗಿರುವುದರಿಂದ ಇವರ ಕತೆಗಳು ಇಂತಹ ಅಂಶಗಳನ್ನು ಒಳಗೊಂಡಿರುತ್ತವೆ ಎನ್ನುವುದನ್ನು ನನ್ನ ಅಧ್ಯಯನದ ಮೂಲಕ ಪರಿಶೀಲಿಸಿದ್ದೇನೆ ಎ.ಎನ್ ಮೂರ್ತಿರಾಯರ ದೆವ್ವಗಳು ಎಂಬ ಪ್ರಬಂಧದಲ್ಲಿಯೂ ಈ ರೀತಿಯ ಪರೋಪಕಾರಿ ದೆವ್ವಗಳ ಪ್ರಸಂಗವನ್ನು ಕಾಣಬಹುದು,

"ಶಬ್ಧಗಳು" ಎನ್ನುವ ಕತೆಯಲ್ಲೂ ಕವಲು ದಾರಿಯಲ್ಲಿ ಅನಾಥವಾಗಿ ಬಿದ್ದಿದ್ದ ಮಗುವನ್ನು ಯಾರೂ ಮಗುವಿನ ಜವಾಬ್ದಾರಿಯನ್ನು ತೆಗೆದುಕೊಳ್ಳದೆ ಹಿಂಜರಿದಾಗ ಯಾರೋ ಒಬ್ಬ ಅಪರಿಚಿತ ವ್ಯಕ್ತಿ ಬಂದು ಮಗುವನ್ನು ಮಾನವೀಯತೆಯ ದೃಷ್ಟಿಯನ್ನಿಟ್ಟುಕೊಂಡು ಎಲ್ಲರನ್ನು ವಿಚಾರಿಸಿದಾಗ ನಂತರ ಆ ಮಗುವನ್ನು ಪೋಲೀಸ್ ಠಾಣೆಗೆ ಒಪ್ಪಿಸಿದರು, ಆದರೆ ಪೋಲೀಸರು ಸಹ ಯಾವುದೇ ನಿರ್ಣಯ ತೆಗೆದುಕೊಳ್ಳುವುದಕ್ಕೆ ಹಿಂಜರಿದಾಗ ಆ ಮಗುವನ್ನು ಈ ಅಪರಿಚಿತ ವ್ಯಕ್ತಿಯೇ ತಂದು ಸಾಕಿದರು ಅಂದಿನ ಸ್ಥಿತಿಯಲ್ಲಿ ಅವರವರು ಜೀವನ ಮಾಡಿ ತಮ್ಮ ಮಕ್ಕಳನ್ನು ತಾವು ನೋಡಿಕೊಂಡರೆ ಸಾಕು ಬೇರೆಯವರ ಬಗ್ಗೆ ಆಲೋಚನೆ ಮಾಡದೆ ಇರುವಂತಹ ದಿನಗಳಲ್ಲಿ ಎಲ್ಲರಿಗಿಂತ ವಿಭಿನ್ನ ವ್ಯಕ್ತಿಯಾಗಿ ಕಂಡುಬರುತ್ತಾರೆ, ಆ ಮಗುವಿನ ಬಗ್ಗೆ ಕಾಳಜಿ ವಹಿಸಿ ವಿಧ್ಯಾಭ್ಯಾಸವಿಲ್ಲದ ರೀತಿಯ ಸೌಕರ್ಯವನ್ನು ನೀಡುವಲ್ಲಿ ಸಾಕುತಂದೆ ಮುಂದಾದರು. *5

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಈ ಸಾಕುತಂದೆ ಎಂದು ಪರಿಚಯವಾಗುತ್ತಿರುವ ವ್ಯಕ್ತಿಯು ಸಮಾಜದಲ್ಲಿ ಉತ್ತಮ ಸ್ಥಾನದಲ್ಲಿದ್ದಂತವನು ವೈಧಿಕ ಪರಂಪರೆಯನ್ನು ಅನುಸರಿಸಿಕೊಂಡು (ಪೌರೋಹಿತ್ಯ) ಕೆಲಸವನ್ನು ಮಾಡುತ್ತಿದ್ದಂತವರು ತಮ್ಮ ನಿಯಮವನ್ನು ಮೀರಿ ಒಬ್ಬ ಅನಾಥ ಮಗುವನ್ನು ತಂದು ಸಾಕುವಂತಹದ್ದು ನಿಜವಾಗಿಯೂ ಅದೊಂದು ಸವಾಲಾಗಿ ಪರಿಣಮಿಸಿತು. ಮಗುವನ್ನು ಸಾಕುವಂತಹ ಮನಸ್ಸು ಬಂದದ್ದು ಒಂದು ದೊಡ್ಡ ಸಂಗತಿಯಾಗಿ ಕಂಡುಬರುತ್ತದೆ, ವೈಧಿಕ ಪರಂಪರೆಗೆ ವಿರೋಧವಾದಂತಹದ್ದು ಅದರಲ್ಲೂ ಬೇರೆ ಧರ್ಮ, ಜಾತಿಗೆ, ವರ್ಗಕ್ಕೆ ಸೇರಿದ ಅಥವಾ ಕುಲಹೀನ ಮಗುವೊಂದನ್ನು ಮುಟ್ಟಿ ತಮ್ಮ ಮಡಿ ಹಾಳಾಯಿತು ಎನ್ನುವುದನ್ನು ಬಿಟ್ಟು ಮಾನವತಾವಾದಿಯಾಗಿ ನಮಗೆ ಕಂಡುಬರುತ್ತಾರೆ.

ಸಂಪ್ರದಾಯ ಶರಣ ಸಮಾಜ ಇದನ್ನು ಒಪ್ಪುತ್ತದೆಯೋ ಎನ್ನುವಂತಹ ವಿಚಾರಕ್ಕೂ ಕಿವಿಗೊಡದೆ ಮಾನವೀಯತೆ, ಮಾನವೀಯ ಮೌಲ್ಯ ಮುಖ್ಯ ಎಂದು ಈ ದಾರಿಯನ್ನು ಆಯ್ಕೆ ಮಾಡಿಕೊಳ್ಳುವಂತದ್ದು ಒಂದು ಸವಾಲಿನ ಹಾಗೂ ಸಮಾಜದ ನಂಬಿಕೆಗಳನ್ನು ಒಡೆಯುವಂತಹ ಕೆಲಸವನ್ನು ಮಾಡಿದ್ದಾರೆ.

"ನೆಲದ ರಕ್ತ" ಯುದ್ದದ ಭೀಕರತೆಯನ್ನು ಕುರಿತು ಹಲವು ವಿಚಾರಗಳು ಈ ಕತೆಯ ಮೂಲಕ ಬಷೀರ್‌ರವರು ಹೇಳುತ್ತಿದ್ದಾರೆ ಯುದ್ದದಲ್ಲಿ ಸೈನಿಕರು ಶತ್ರುಗಳ ಹೆಣದ ರಾಶಿಯನ್ನು ಸಾಯಿಸಿದರು/ಕೊಂದಿದ್ದರು, ಅವರುಗಳ ರಕ್ತವು ಪಾತ್ರಗಳಲ್ಲಿ ಸಂಗ್ರಹವಾಗಿತ್ತು ಅಂದರೆ ಯುದ್ದದ

ಭೀಕರತೆಯನ್ನು ಕುರಿತು ಮನಕಲಕುವಂತೆ ಚಿತ್ರಿಸಲಾಗಿದೆ, ಪಾತ್ರೆಯಲ್ಲಿರುವುದು ನೀರು ಎಂದು ಭಾವಿಸಿ ಕುಡಿದೆವು ಎನ್ನುವಂತಹ ವಿಚಾರವು ಈ ಕತೆಯ ಮಾನವೀಯತೆಯನ್ನು ಪ್ರಾಧಾನ್ಯತೆ ಇರುವುದಿಲ್ಲ ದಯ, ಕರುಣೆಯೇ ಇಲ್ಲದಂತೆ ಜೀವಹಾನಿಯಾಗುತ್ತಿರುವುದರ ಬಗ್ಗೆ ಲೇಖಕರು ವಿಷಾದವನ್ನು ವ್ಯಕ್ತ ಪಡಿಸುತ್ತಿದ್ದಾರೆ.

ವೈಕಂರವರ ಕತೆಗಳಲ್ಲಿ ಹಿಡಿದಿರುವ ಸಾಮಾಜಿಕ ಜೀವನ ಜಗತ್ತು ಧಾರ್ಮಿಕ ಮತ್ತು ಶ್ರೇಣೀಕೃತ ಸಮಾಜದೊಳಗಿನ ಅಂತರಂಗ ಬಹಿರಂಗ ಜಗತ್ತುಗಳನ್ನು ಹಿಡಿದಿಡುತ್ತಾರೆ, ತಮ್ಮ ಕತೆಯೊಳಗಿನ ಪಾತ್ರಗಳಲ್ಲಿ ಹಲವು ಆಯಾಮಗಳು ಅನುಭವಗಳು ಮಾತ್ರ ಸ್ವತಹ ಲೇಖಕರದೇ ಆಗಿರುವುದರಿಂದ ಆ ಕತೆಗಳು ಒಂದು ಅಥೆಂಟಿಸಿಟಿಯನ್ನು ಪಡೆದುಕೊಂಡಿದೆ ಅವರ ನಿರೂಪಣಾ ಶೈಲಿಯು ಅತ್ಯಂತ ಸರಳವಾಗಿದ್ದು, ಹಾಸ್ಯಭರಿತವು ಆಗಿ ಹೊಂದಿಸಿಕೊಂಡು ಹೋಗುತ್ತದೆ.

"ಜೀವನದ ಕರಿನೆರಳು" ಅಬ್ಬಾಸ್‌ನಿಗೆ ಜೀವನದ ಎಲ್ಲಾ ದಾರಿಗಳು ಮುಚ್ಚಿಹೋಗಿದ್ದವು ಅನೇಕ ತೊಂದರೆಗಳಿಗೆ ಸಂಕಟಕ್ಕೆ ಗುರಿಯಾದನು ಜೀವನದ ಮೇಲೆ ಒಂದು ರೀತಿಯ ಜಿಗುಪ್ಸೆ ಬಂದು ನಿರಾಶೆಯಿಂದ ಕಂಗಾಲಾಗಿದ್ದಾಗ ಜಬ್ಬಾರ್ ಎನ್ನುವ ವ್ಯಕ್ತಿಯ ಪರಿಚಯವಾಗಿ ಮತ್ತೆ

ಜೀವನದಲ್ಲಿ ಉತ್ಸಾಹ ಮೂಡಿತು ಒಂದು ಕೆಲಸ ಸಿಗುವಂತಹ ಸೂಚನೆ ಮಿಲ್ಲಿನಲ್ಲಿ ನಿನಗೂ ಕೆಲಸ ಕೊಡಿಸುವುದಾಗಿ ಹೇಳಿದ ಇಂತಹ ಮನೋಧರ್ಮ ಹೊಂದಿರುವ ವ್ಯಕ್ತಿ ಸಿಗುವುದು ಅಪರೂಪದ ಸಂಗತಿ ಮತ್ತೆ ಜೀವನದ ಮೇಲೆ ಭರವಸೆ ಮೂಡಿಸಿದವನು. *6

"ಹೂಬಾಳೆ" ಎಂಬ ಕತೆಯಲ್ಲಿಯೂ ಸಹ ಮಾನವೀಯತೆಗೆ ಸಂಬಂಧಿಸಿದಂತಹ ವಿಷಯವನ್ನು ಇವರ ಕತೆಗಳಲ್ಲಿ ಕಾಣಬಹುದಾಗಿದೆ.

'ಜಮೀಲಾ ಬೀಬಿ' ಇವಳು ತನ್ನ ಗಂಡನ ಬಗ್ಗೆ ಕನಿಕರವೇ ಇಲ್ಲದಂತೆ ಅವನೇ ಪ್ರಾಣ ಅಪಾಯದ ಸ್ಥಿತಿಯಲ್ಲಿದ್ದರೂ ಸಹ ಹೂಬಾಳೆಯನ್ನು ತಂದಿಲ್ಲ ಎಂಬ ಕಾರಣಕ್ಕಾಗಿ ಅವನನ್ನು ದೂಷಿಸುತ್ತಾಳೆ ಇವಳಲ್ಲಿ ಸ್ವಲ್ಪವೂ ಕನಿಕರವಾಗಲಿ, ದಯೆಯಾಗಲಿ ಇರುವುದನ್ನು ಕಾಣಲು ಸಾಧ್ಯವಾಗುವುದಿಲ್ಲ ಅಥವಾ ಅವನು ಹೂಬಾಳೆ ತರುವ ಪ್ರಸಂಗವನ್ನು ಅವಳು ಅನುಭವಕ್ಕೆ ತಂದು ಕೊಂಡಿರುವುದಿಲ್ಲ ಈ ಪ್ರಸಂಸೆ ಸೌಗಂಧಿಕಾ ಪುಷ್ಪ ತರುವ ಭೀಮನ ಸಾಹಸವನ್ನು ನೆನಪಿಸಿ ಪುರಾಣದ ಛಾಯೆಯನ್ನು ಒಳಗೊಂಡಿದೆ. *7

"ಸಂಜೆಯ ಪ್ರಾರ್ಥನೆ" ಕತೆಯಲ್ಲಿ ಒಬ್ಬ ಅಸಹಾಯಕ ವ್ಯಕ್ತಿಯು ಅನಾರೋಗ್ಯ ಪೀಡಿತ, ವಯಸ್ಸಾದವನು ದೇವರಲ್ಲಿಯೇ ಕರುಣೆ, ದಯೆ, ಅನುಕಂಪವಿಲ್ಲ ಎಂದು ಅರೋಪಿಸುವಂತಹ ಸಂದರ್ಭಗಳು ಈ ಕತಾ ಭಾಗದಲ್ಲಿ ಗುರುತಿಸಬಹುದಾಗಿದೆ.
ದೇವರೇ ಸೃಷ್ಟಿಸಿರುವ ಈ ಜಗತ್ತಿನಲ್ಲಿ ನಡೆಯುತ್ತಿರುವಂತಹ, ಕೃತ್ಯಗಳು ಹಿಂಸೆ, ನಿತ್ಯ ನರಳುವಿಕೆಯ ಜೀವನ, ನೀನು ದಯಮಾಡಿ ನಮ್ಮ ಕಷ್ಟದ ಧ್ವನಿಯನ್ನು ಕೇಳಿಸಿಕೋ ನಮ್ಮಲ್ಲಿ ಕರುಣೆಯನ್ನು ತೋರು. ನೀನು ಕರುಣಾಮಯಿ ನೀನು ನಮ್ಮನ್ನು ಈ ಎಲ್ಲ ಕಷ್ಟಗಳಿಂದ ಪಾರುಮಾಡು ಎಂದು ಒಬ್ಬ ವ್ಯಕ್ತಿ ಗೋಗರೆಯುತ್ತಿದ್ದಾನೆ.

ಆ ವ್ಯಕ್ತಿಯ ಸುತ್ತಮುತ್ತಲಿನಲ್ಲಿರುವವು, ಅಥವಾ ಕುಟುಂಬದ ಸದಸ್ಯರಾಗಲಿ ಆತನನ್ನು ಆರೈಕೆ ಮಾಡಿ ನೋಡಿಕೊಳ್ಳಲಾಗದಷ್ಟು ಕ್ರೂರಿಗಳ ಹಾಗೆ ಮೃಗೀಯ ಭಾವನೆಯನ್ನು ತೋರಿರುವುದು ತಿಳಿದುಬರುತ್ತದೆ. ಯಾಕೆಂದರೆ, ಅವನು ಯಾರಲ್ಲಿಯೂ ಸಹಾಯವನ್ನು ಕೇಳದೆ ನೇರವಾಗಿ ದೇವರಲ್ಲಿ / ಸೃಷ್ಟಿಕರ್ತನಲ್ಲಿಯೇ ಪ್ರಾರ್ಥಿಸುತ್ತಿದ್ದಾನೆ ಎಂದರು. ಅಲ್ಲಿಗೆ ಅವನ ಮನಸ್ಥಿತಿಯು ಎಷ್ಟು ನೊಂದಿರಬೇಕು? ಕಷ್ಟಕಾಲಕ್ಕೆ ಯಾರೂ ಸಹ ನೆರವಾಗುವುದಿಲ್ಲ ಎನ್ನುವಂತಹ ಭಾವ ಒಂದುಕಡೆಯಾದರೆ, ಸ್ವಾರ್ಥ ಜನಗಳ ಮಧ್ಯೆ ಬದುಕುತ್ತಿದ್ದೇವೆ ಎನ್ನುವಂತಹ ವಿಚಾರ ಈ ಕತೆಯಲ್ಲಿ ಅರ್ಥವತ್ತಾಗಿದೆ. *8

ಮನುಷ್ಯರು ತಮ್ಮ ಮನುಷ್ಯತ್ವವನ್ನೇ ಮರೆತು – ಸ್ವಾರ್ಥತೆಯಿಂದ ಬದುಕುತ್ತಿರುವುದಕ್ಕೆ ಕಾರಣಗಳು. ಅವನ ಬದುಕು. ಪರಿಸರ ಕೌಟುಂಬಿಕ ವಿಚಾರಗಳು ಕಾರಣವಾಗುತ್ತವೆ. ಮನುಷ್ಯನ ಬದುಕು ಇಂತಹ ಜಂಜಾಟದ ಜೀವನವನ್ನು ಅನುಭವಿಸುತ್ತಿರುವಂತದ್ದು ಇಂದಿಗೂ ಕೂಡ ಪ್ರಸ್ತುತವೆಂಬುದು ವೈಕಂ ರವರ ಕತೆಗಳು ಮೂಲಕ ಸಾಬೀತುಪಡಿಸುತ್ತಿದೆ. ಕಲ್ಲು ಹೃದಯವಂತಿಕೆಯನ್ನು ಬೆಳಸಿಕೊಳ್ಳುವುದನ್ನು ಮನುಷ್ಯನೇ, ಯಾಂತ್ರಿಕವಾಗಿ ಬದಲಾಗುತ್ತಿರುವುದು. ಹಾಗೂ ಯಾಂತ್ರಿಕ/ ಕೃತಕ ಜೀವನ ಶೈಲಿಗೆ ತನ್ನನ್ನು ತಾನೇ ಒಳಗುಮಾಡಿರುವುದರಿಂದ ಮಾನವೀಯ ಮೌಲ್ಯಗಳ ಅಪವ್ಯಯವಾಗುತ್ತಿರುವುದು ಕಂಡುಬರುತ್ತದೆ.

"ಏಕಾಂತದ ತೀರ" – ಈ ಕತೆಯಲ್ಲ ಇಬ್ಬರು ಪ್ರೇಮಿಗಳನ್ನು ತಾಯಿ, ಸ್ನೇಹಿತೆ ಕೇಳುವಂತಹ ಪ್ರಶ್ನೆಗಳಿಗೆ ಉತ್ತರಿಸಲಾಗದೆ, ನಿಜವನ್ನು ಹೇಳಲಾಗದೆ, ಆ ಹುಡುಗಿ ಒದ್ದಾಡುವಂತಹ ಸ್ಥಿತಿಯನ್ನು ಈ ಕತೆಯಲ್ಲಿ ಗಮನಿಸಬಹುದು. ಅಂದರೆ, ಪ್ರೀತಿಗೆ ಸ್ವಲ್ಪವೂ ಸಹ ಬೆಲೆಕೊಡದೆ, ಅದು ನಮ್ಮ ಮನೆ ಮರ್ಯಾದೆ ತೆಗೆಯುವಂತದ್ದು ಎಂದು ಭಾವಿಸಿ, ಆ ಹುಡುಗಿಯ ತಾಯಿ ಇಲ್ಲ ಇಬ್ಬರ ಮೇಲು ಕರುಣೆ ದಯೆ ಇರದೆ, ಮನುಷ್ಯ – ಮನುಷ್ಯತ್ವವನ್ನು ಕಳೆದುಕೊಂಡಾಗ ಏನಾಗುತ್ತದೆ ಎನ್ನುವುದಕ್ಕೆ ಈ ಇಬ್ಬರೂ ಪ್ರೇಮಿಗಳ ಆಗಲಿಕೆಯೇ ಇದಕ್ಕೆ ಕಾರಣವಾಗುವಂತಹದ್ದು ಕಂಡುಬರುತ್ತದೆ. *9

"ವಾರಸುದಾರರು" ಕತೆಯಲ್ಲಿಯೂ ಸಹ ಮಾನವೀಯ ನೆಲೆಯನ್ನು ಹುಡುಕುವಂತಹ ಶೋಧ ನಡೆಯುವಂತಾಗಿದೆ. ಈ ಕತೆಯಲ್ಲಿ ಮನುಷ್ಯನು ತನ್ನ ಸ್ವಾರ್ಥದಿಂದ,ಹಾಗೂ ವೈಜ್ಞಾನಿಕತೆ, ಮತ್ತು ನಾಗರಿಕನಾಗುತ್ತಿದ್ದಂತೆಯೇ ಮನುಷ್ಯತ್ವ, ಮನಷ್ಯನಿಗಿರಬೇಕಾದ ಪ್ರೀತಿ, ಕರುಣೆ, ದಯೆ, ಸಹನೆಯನ್ನು ಕಳೆದುಕೊಂಡು ಸ್ವಾರ್ಥ ಜೀವನವನ್ನು ನಡೆಸುವಂತದ್ದನ್ನು ಈ ಕತೆಯಲ್ಲಿ ನನ್ನ ಸಂಶೋಧನೆಯಿಂದ ತಿಳಿದು ಬಂದಂತಹ ವಿಚಾರವಾಗಿದೆ.

ಅಂದರೆ, ಈ ಕತೆಯಲ್ಲಿ ಮನುಷ್ಯನು ಆಧುನಿಕತೆ ಮತ್ತು ನಾಗರೀಕತೆಗೆ ತೆರೆದುಕೊಳ್ಳತ್ತಾ ಹೋದಂತೆ, ಅವನ ವ್ಯಕ್ತಿತ್ವದಲ್ಲಿ ಮಾರ್ಪಾಟುಗಳಾಗುತ್ತವೆ. ಮನುಷ್ಯತ್ವವನ್ನು ಕಳೆದುಕೊಳ್ಳುವುದನ್ನು ಈ ಕತೆಯಲ್ಲಿ ನಾವು ಗಮನಿಸಬಹುದಾಗಿದೆ. *10

ಮನುಷ್ಯರು ತಮ್ಮ ಇರುವಿಕೆಯನ್ನು ತೋರಿಸಿಕೊಳ್ಳುವುದೇ ಒಂದು ಜೀವಿ ಮತ್ತೊಂದು ಜೀವಿಯ ಮೇಲೆ ಆಕ್ರಮಣ ಮಾಡುವುದರಿಂದ ಎಂದು ತಿಳಿದಿರುವಂತಹ ಭಾವನೆಯನ್ನು ಈ ಕತೆಯ ಹಿನ್ನೆಲೆಯಲ್ಲಿ ವೈಕಂ ರವರು ಬಹಳ ಚೆನ್ನಾಗಿ ವಿಮರ್ಶಿಸುತ್ತಾ! ಓದುಗರನ್ನು ಆಲೋಚನೆಗೆ ಹಚ್ಚುತ್ತಾರೆ.

ಒಂದು ಜೀವಿ ಮತ್ತೊಂದು ಜೀವಿಯನ್ನು ಅವಲಂಬಿಸಿರುತ್ತದೆ. ಇದು ಪ್ರಕೃತಿ ಸಹಜ ಪ್ರಕ್ರಿಯೆ. ಅದನ್ನೇ ಮರೆತು, ಮನುಷ್ಯರಿಗೆ ಮಾತ್ರ ಭೂಮಿ ಮೇಲೆ ಬದುಕುವ ಹಕ್ಕು ಇದೆ. ಪ್ರಾಣಿ ಪಕ್ಷಿಗಳಿಗಿಲ್ಲ

ಎನ್ನುವ ಮನಸ್ಥಿತಿ ಉಳ್ಳಂತಹ ವಿಚಾರ ಈ ಕತೆಯಲ್ಲಿ ಬಾವುಲಿಗಳನ್ನು ಕೊಲ್ಲುವಂತಹ ಸನ್ನಿವೇಶ ಎದುರಾಗುವುದನ್ನು ಈ ಕತೆಯು ಅನಾವರಣಗೊಳಿಸಿದೆ.

"ಲೋಕ ಪ್ರಸ್ತಿದ್ದ ಮೂಗು" – ಈ ಕತೆಯಲ್ಲಿ ತಿಳಿದುಬರುವುದೇನೆಂದರೆ, ದೇಹದ ಅಂಗವಿಕಲತೆಯಿಂದಾಗಿ ಕಾಮ್ರೆಡ್ ಎಂಬ ಉದ್ದಮೂಗಿನ ವ್ಯಕ್ತಿಯು ಕೆಲಸ ಕಳೆದುಕೊಳ್ಳುವಂತಹ ಸ್ಥಿತಿ ಉಂಟಾಯಿತು. ಇವನು ಮುಗ್ದ ಜೀವಿಯಾಗಿದ್ದನು. ಅವನ ತಾಯಿಯ ಆರೈಕೆಯಲ್ಲಿ 24 ವರ್ಷ ಬೆಳೆಯುತ್ತಾನೆ. ಲೋಕಜ್ಞಾನವಿಲ್ಲದ, ವಿದ್ಯೆ ಇಲ್ಲದ ಅವಿದ್ಯಾವಂತನಾಗಿ ಬೆಳೆಯುತ್ತಾನೆ ಬಡತನ, ಹಸಿವು, ಈ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದಕ್ಕೆ ಕೆಲಸಕ್ಕೆ ಹೋಗುವುದನ್ನು ಆದರೆ, ಇವನ ದೇಹದಲ್ಲಿ ಆದಂತಹ ವ್ಯತ್ಯಾಸದಿಂದ ಕೆಲಸ ಕಳೆದುಕೊಳ್ಳಬೇಕಾಯಿತು. ನಂತರ ಇವನಿಗೆ ಯಾರೂ ಸಹಾಯ ಮಾಡಲಿಲ್ಲ. ಬದಲಿಗೆ ಎಲ್ಲಾ ಜನರೆದುರಿಗೆ ಇವನು ಹಾಸ್ಯದ ವ್ಯಕ್ತಿಯಾಗಿ, ಪ್ರದರ್ಶನದಗೊಂಬೆಯ ರೀತಿ

ಇವನನ್ನು ಕೀಳಾಗಿ ಕಾಣುವ ಮನಸ್ಥಿತಿ ಬೆಳೆಯಿತೇ ವಿನಹ ಅವನ ಬಗ್ಗೆ ಸಹಾನುಭೂತಿಯಾಗಲಿ, ದಯೆ, ಕರುಣೆ, ಅವನ ಆರೋಗ್ಯದ ಸಮಸ್ಯೆಗೆ ಚಿಕಿತ್ಸೆ ಕೊಡಿಸುವುದಕ್ಕಾಗಲಿ, ಯಾರೂ ಸಹ ಮುಂದೆ ಬರಲಿಲ್ಲ. ಎಲ್ಲರೂ ಇವನನ್ನು ಒಬ್ಬ ಅದ್ಬುತ ವ್ಯಕ್ತಿಯನ್ನಾಗಿ ಮೋಜುಗಾರನಾಗಿ ಮಾಡಿಕೊಂಡು ನಿಕೃಷ್ಟನಾಗಿ ನೋಡಿದರೇ ವಿನಹ, ಅಲ್ಲಿ ಅವನ ನೋವನ್ನು ಕೇಳುವ, ಸಮಸ್ಯೆಗೆ ಸ್ಪಂದಿಸುವ ಉದ್ದಮೂಗಿನಿಂದ ದೇಹದಲ್ಲಿ ಅನೇಕ ರೀತಿಯ ತೊಂದರೆಗಳು ಕಾಣಿಸಿಕೊಂಡವು. ಈ ಸಮಸ್ಯೆಗೆ ಯಾರಿಂದಲೂ ಸಹಾಯವಿಲ್ಲದೆ ಬದುಕಬೇಕಾದಂತಹ ಸ್ಥಿತಿ ತಲುಪಿದ. *11

ಇಲ್ಲಿ ಮಾನವೀಯತೆ, ಮಾನವ ಧರ್ಮವಾಗಲಿ ನಮಗೆ ಕಂಡುಬರುವುದಿಲ್ಲ. ಒಟ್ಟಿನಲ್ಲಿ ಜನರೆಲ್ಲರೂ ಸ್ವಾರ್ಥಿಗಳಾಗಿ ಬದುಕುವುದನ್ನು ಬೇರೆಯವರ ಕಷ್ಟದಲ್ಲಿ ನೆರವಾಗುವುದನ್ನು ಮರೆತಿರುವ ಮನಸ್ತಿತಿಉಳ್ಳವರಾಗಿದ್ದಾರೆ. ಮನುಷ್ಯ ಮುನಷ್ಯನಿಗೇ ನೆರವಾಗದೆ ಇರುವಂತಹ ಮಾನವೀಯತೆಯನ್ನು ಕಾಣುವುದಕ್ಕೆ ಸಾಧ್ಯವಿಲ್ಲ. ಕೊನೆಯಲ್ಲಿ ಈ ವ್ಯಕ್ತಿಯ ಜೀವನವೇ ಬೇರೆ ರೀತಿಯಲ್ಲಿ ಬದಲಾಗುವಂತಹ ಸ್ಥಿತಿ ಈ ಕತೆಯಲ್ಲಿ ಕಾಣಬಹುದು. ಕೊನೆಯಲ್ಲಿ ಹೆಸರು, ಕೀರ್ತಿ, ಹಣ ಗಳಿಸಿ, ರಾಜಕೀಯ ಪಕ್ಷಕ್ಕೆ ಸೇರಿದ ತನ್ನ ಆಪ್ತ ವ್ಯಕ್ತಿಯಿಂದಲೇ, ನಂಬಿರುವಂತಹ ವ್ಯಕ್ತಿಯಿಂದಲೇ ತನ್ನ ಜೀವನಕ್ಕೆ ಸಂಚಕಾರವನ್ನು ತಂದು ಅವನನ್ನು ಹೀಗಳೆಯುತ್ತಾರೆ.

ಒಬ್ಬ ವ್ಯಕ್ತಿ ಮೇಲೆ ಬರುತ್ತಾನೆ ಎಂದರೆ ನಮ್ಮ ಸುತ್ತ ಮುತ್ತಲಿರುವಂತಹ ಜನ ಸಹಿಸುವುದಿಲ್ಲ. ಅಮಾನವೀತೆಯಿಂದ ವರ್ತಿಸುತ್ತಾರೆ. ಅವನಿಗೆ ತೊಂದರೆ ಕೊಡುವ ಕೆಲಸವನ್ನು ಮಾಡುತ್ತಾರೆ. ಅದೇ ರೀತಿಯ ಸನ್ನಿವೇಶ ಈ ಕತೆಯಲ್ಲೂ ಕಾಮ್ರೆಡ್‌ನ ಜೀವನದಲ್ಲಿ ನಡೆಯುತ್ತದೆ. ಅವನು ಉದ್ದ

ಮೂಗೆಂದು ಜನರಿಗೆ ವಂಚಿಸಿದ್ದಾನೆ. ಅವನದು ರಬ್ಬರ್/ಕೃತಕ ಮೂಗೆಂದು ಅದನ್ನು ಕಿತ್ತಾಕುವ ಪ್ರಯತ್ನಗಳು ನಡೆಯುತ್ತವೆ. ಹಾಗೂ 48 ದೇಶಗಳನ್ನು ಪ್ರತನಿಧಿಸುವ ಚತುರ ವೈದ್ಯರುಗಳು ಅವನನ್ನು ಪರೀಕ್ಷೆ ಮಾಡುತ್ತಾರೆ. ಈ ರೀತಿಯಾಗಿ ಅವನ ಮಾನ, ಮರ್ಯಾದೆ, ಗೌರವವನ್ನು ಮಾಧ್ಯಮದೆದುರು ಹಾಳು ಮಾಡುತ್ತಾರೆ. ನಂತರ ಶೋಧನಾ ಕಾರ್ಯದಲ್ಲಿ ವೈದ್ಯರುಗಳು ಅವನನ್ನು ಪರೀಕ್ಷೆಗೆ ಒಳಪಡಿಸಿದರು. ಅನೇಕ ವಿಧದಲ್ಲಿ ಅವನಿಗೆ ಹಿಂಸೆಯನ್ನು ಕೊಡುವುದರ ಮೂಲಕ ತಮ್ಮ ಪರೀಕ್ಷೆಯನ್ನು ಮಾಡತೊಡಗಿದರು. ಸತ್ಯ–ಮಿತ್ಯತೆಯ ಬಗ್ಗೆ ನಿರ್ಧರಿಸುವವರೆಗೊ ಇದೆಲ್ಲದರ ನೊವನ್ನು ಹಿಂಸೆಯನ್ನು ಅವಮಾನವನ್ನು ಬೇರೆದಾರಿಯಿಲ್ಲದೆ ಕಾಮ್ರೆಡ್ ಸಹಿಸಿಕೊಳ್ಳಬೇಕಾಯಿತು. ಅಲ್ಲಿ ನೆರೆದಿದ್ದವರು ಕ್ರೂರ ಸ್ವರೂಪವನ್ನು ತಾಳಿ ಅವನ ಮೂಗಿನ ಸೊಳ್ಳೆಗಳನ್ನು ಬಿಗಿಯಾಗಿ ಉಸಿರಾಡದಂತೆ ಅದುಮಿ ಹಿಡಿದ. ಮತ್ತೊಬ್ಬ ಸೂಜಿಯ ಮೊನೆಯಿಂದ ಮೂಗಿಗೆ ಚುಚ್ಚಿದ. ಚುಚ್ಚಿದ ಜಾಗದಿಂದ ಒಂದೊಂದೇ ಹನಿ ರಕ್ತ ಜಿನುಗಲಾರಂಭಿಸಿತು. ಈ ರೀತಿಯಾಗಿ ಕಾಮ್ರೆಡ್‌ನನ್ನು ವಿಚಿತ್ರವಾಗಿ ಕ್ರೂರವಾಗಿ ವರ್ತಿಸಿತ್ತಿರುವವರನ್ನು ಈ ಕತೆಯಲ್ಲಿ ಕಾಣಬಹುದು. ಕಾಮ್ರೆಡ್‌ನನ್ನು ಅವಮಾನಿಸುವ, ನಂಬಿಕೆಯನ್ನು ವಿಶ್ವಾಸವನ್ನು ಕಳೆದುಕೊಂಡಂತಹ ವ್ಯಕ್ತಿಗಳ ಮನಸ್ಥಿತಿಯನ್ನು ಹಾಗೂ ಯಾರಲ್ಲಿಯೂ ಈ ವ್ಯಕ್ತಿಯ ಬಗ್ಗೆ ಕನಿಕರವಾಗಲಿ, ಸಹಾನೂಭೂತಿಯಾಗಲಿ ಇಲ್ಲದೆ, ಮೋಜು, ಮಜವನ್ನು ನೋಡುವುದಕ್ಕೆ ಬರುವಂತಹ ಸ್ಥಿತಿ ಈ ಕತೆಯಲ್ಲಿ ಕಂಡುಬರುತ್ತದೆ. ವೈಕಂ ರವರು ಮಾನವೀಯ ನೆಲೆಯ ಅಂಶವನ್ನು ಈ ಕತೆಯಲ್ಲಿ ತಮ್ಮ ಮೊನಚು ಬರವಣಿಗೆಯ ಮೂಲಕ ಸಮಾಜದ ಸ್ಥಿತಿಗತಿಯನ್ನು ಬರೆದಿದ್ದಾರೆ.

**ಧಾರ್ಮಿಕ ಸಂಘರ್ಷದ ನೆಲೆಗಳು:–**

ವೈಕಂ ರವರ ಕತೆಯಲ್ಲಿ ಕಂಡುಬರುವಂತಹ ಧಾರ್ಮಿಕ ನಂಬಿಕೆ, ಸಂಪ್ರದಾಯ, ಧಾರ್ಮಿಕ ಕಲಹಗಳಿಗೆ ಸಂಬಂಧಿಸಿದ ವಿಚಾರಗಳು, ಜಾತಿ, ಧರ್ಮವನ್ನು ಮೀರುವಂತಹ ಮನಸ್ಸುಗಳು ಇವರ ಕತೆಗಳಲ್ಲಿ ಪ್ರಮುಖವಾಗಿ ಕಂಡುಬರುತ್ತವೆ.

ಅಂದಿನ ಸಮಾಜವು ಸಂಪ್ರದಾಯ ಭೂಯಿಷ್ಟತೆಯಿಂದ ಕೂಡಿದ್ದು, ಸಂಪ್ರದಾಯ, ನಂಬಿಕೆಗಳನ್ನು ಮೀರುವಂತಹ ಸಂಗತಿಗಳ ಬಗ್ಗೆ ಇವರ ಕತೆಗಳು ಬೆಳಕು ಚೆಲ್ಲುತ್ತವೆ, ಇಡೀ ಸಮಾಜದ ವ್ಯವಸ್ಥೆಯನ್ನು ಪ್ರಶ್ನಿಸುವಂತಹ ರೂಢಿಗಳನ್ನು ತಿರಸ್ಕರಿಸುವ ಮನಸ್ಸುಗಳು ಅಥವಾ ಮುಂದಿನ ಬದಲಾಗುತ್ತಿರುವ ಸಂಬಂಧವನ್ನು ಹೇಳುತ್ತಿದೆ.

ಧಾರ್ಮಿಕ ಸಂಘರ್ಷವು ಇವರ ಬಾಲ್ಯ ಜೀವನದಿಂದಲೇ ಪ್ರಾರಂಭವಾಗುತ್ತದೆ, ಬಷೀರ್‌ರವರು ಮುಸ್ಲಿಂ ಜನಾಂಗಕ್ಕೆ ಸೇರಿದವರಾಗಿದ್ದರಿಂದ ಇವರಿಗೆ ಇಂಗ್ಲೀಷ್ ಕಲಿಯುವುದು

ಅಂದು ಕಟ್ಟಾ ಮುಸ್ಲಿಮರು ಸಂಪ್ರದಾಯದ ವಿರುದ್ದವಾಗಿತ್ತು ಇಂಗ್ಲಿಷ್ ಏನಿದ್ದರೂ 'ಕಾಫಿರ' ರ ಭಾಷೆಯೆಂದು ತಿಳಿದಿದ್ದ ಕಾಲ ಇದರಿಂದ ಧಾರ್ಮಿಕ ಸಂಘರ್ಷದ ಬಗ್ಗೆ ಹೆಚ್ಚಿನ ಪರಿಣಾಮ ಪ್ರಭಾವ ಬೀರಿದ್ದರಿಂದ ತಮ್ಮ ಕತೆಗಳಲ್ಲಿ ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿದಂತೆ ಬರೆಯುವುದಕ್ಕೆ ಪ್ರೇರಣೆ ನೀಡಿತು ಎಂಬ ವಿಚಾರ ಬಷೀರ್ ಬದುಕು ಎಂಬ ಪುಟದಿಂದ ತಿಳಿದುಬರುತ್ತದೆ.

*12(ಮುನ್ನುಡಿ)

ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ದಿನಗಳವು ಹುಡುಗ ಬಷೀರನಿಗೆ ಮಹಾತ್ಮಗಾಂಧಿ, ನೆಹರು, ಮೌಲನಾ ಅಬ್ದುಲ್ ಕಲಾಂ ಅಜಾದ್‌ರವರ ಹೆಸರು ಕೇಳಿದರೇ ರೋಮಾಂಚನವಾಗುತ್ತಿತ್ತು 1924ರ ಮಾರ್ಚ್‌ನಲ್ಲಿ ಗಾಂಧೀಜಿ ವೈಕಂಗೆ ಬೇಟಿ ನೀಡಿ ಅಲ್ಲಿನ ಹಿಂದುಳಿದವರಿಗೆ, ದಲಿತರಿಗೆ, ದೇವಸ್ಥಾನಗಳಿಗೆ ಪ್ರವೇಶ ನೀಡಬೇಕೆಂದು ಒತ್ತಾಯಿಸಿದರು, ಇದರಿಂದ ತುಂಬಾ ಪ್ರಭಾವಿತನಾದ ಹುಡುಗ ಬಷೀರ್ ಕೇವಲ 5ನೇ ತರಗತಿ ಓದಿಗೆ ತಿಲಾಂಜಲಿ ಇಟ್ಟು ಒಂದು ದಿನ ರಾತ್ರಿ ಮನೆಬಿಟ್ಟು ಹೋಗುವುದರ ಮೂಲಕ ರಾಷ್ಟ್ರವ್ಯಾಪ್ತಿ ಹತ್ತಿ ಉರಿಯುತ್ತಿದ್ದ ಸ್ವತಂತ್ರ್ಯ ಚಳುವಳಿಗೆ ಪ್ರಾಮಾಣಿಕವಾಗಿ ಸ್ಪಂದಿಸಿದರು ಇದರ ಪರಿಣಾಮವಾಗಿ ಸೆರೆಮನೆ ವಾಸವನ್ನು ಅನುಭವಿಸಿ ಜೈಲಿನಿಂದ ಹೊರಬಂದು ಹಿಮಾಲಯದಲ್ಲಿ ಸಂತರ ಜೊತೆಯಲ್ಲಿ ನಗ್ನ ಸನ್ಯಾಸಿಗಳ ಜೊತೆಯಲ್ಲಿ, ಹುಚ್ಚರ ಜೊತೆಯಲ್ಲಿ, ಭಂಗಿ ಬಾಬರ ಸನ್ನಿದಿಯಲ್ಲಿ ಸೂಫಿಸಂತರ ದರ್ಗಾಗಳಲ್ಲಿ ದೇವರನ್ನು ಧ್ಯಾನಿಸಿದರು.

ಅವರು ತಮ್ಮ ಕೊನೆಯ ಬರವೊಂದರಲ್ಲಿ ಹೇಳುತ್ತಾರೆ, ನಾನು ಹಿಂದೂ ಸನ್ಯಾಸಿಯ ಜೊತೆ, ಮುಸ್ಲಿಂ ಸಂತರ ಜೊತೆ ಕಳೆದ ದಿನಗಳು ನೆನಪಾಗುತ್ತಿವೆ, ಅದೊಂದು ಹುಡುಕಾಟವಾಗಿತ್ತು ದೇವರ ನಾಮಗಳನ್ನು ಜಪಿಸುತ್ತಿದ್ದೆ, ನಿರಂತರ ಧ್ಯಾನವಾಗಿತ್ತು ಅದು ಗಡ್ಡವನ್ನು ಮುಡಿಯನ್ನೂ ಬೆಳೆಸಿ ಪರಿಪೂರ್ಣ ನಗ್ನತೆಯ ಇರುವು, ಪದ್ಮಾಸನ, ಯೋಗದಂಡ, ಅಯ್ಯೋ ಪಡೆದವನೆ ಯೋಚಿಸುತ್ತಿದ್ದೇನೆ 'ಅಹಂ ಬ್ರಹ್ಮಾಸ್ಮಿ' ಅದೇ ಮಂತ್ರವನ್ನು ಧ್ಯಾನದಿಂದ ಎದ್ದ ಮುಸ್ಲಿಂ ಸೂಫಿಸಂತರು ಪಠಿಸುತ್ತಾರೆ ಇಹಲೋಕದ ಜೀವಿತ ಒಂದು ದೊಡ್ಡ ತಮಾಷೆಯೆ ಭಗವಂತನ ಲೀಲಾವಿಲಾಸ.

ಈ ಎಲ್ಲಾ ದೃಷ್ಟಿಕೋನದಿಂದ ಬಷೀರ್‌ರವರ ಕತೆಗಳಲ್ಲಿ ಧರ್ಮಾತೀತವಾದ ಧರ್ಮ, ಜಾತಿ, ಸಂಪ್ರದಾಯ ಎಂಬ ವಿಚಾರದ ಬಗ್ಗೆ ಹೆಚ್ಚು ಪರಿಣಾಮಕಾರಿಯಾಗಿ ಬರೆಯುವುದಕ್ಕೆ ನೆರವಾಯಿತು, ಎನ್ನುವುದು ನನ್ನ ಅಧ್ಯಯನದ ಹಿನ್ನೆಲೆಯಿಂದ ತಿಳಿಯ ಹೊರಟಿರುವ ವಿಚಾರವಾಗಿ ಕಂಡುಬರುತ್ತದೆ.

"ಪ್ರೇಮ ಪತ್ರ" ಈ ಕತೆಯಲ್ಲಿ ವರದಕ್ಷಿಣೆ ಕೊಟ್ಟು ಮದುವೆ ಮಾಡಲಾಗದ ಸ್ಥಿತಿಯಲ್ಲಿ ಸರುಮಾಳ ಕುಟುಂಬ ಇರುತ್ತದೆ ಕೇಶವ್ ಎನ್ನುವರು ಇದಕ್ಕೆ ಪರಿಹಾರವನ್ನು ಸೂಚಿಸುದೆಂದರೆ, ಅಂತರ್ ಜಾತಿ, ವಿವಾಹದಿಂದ ಮಾತ್ರವೇ ಈ ಸಮಸ್ಯೆಗೆ ಪರಿಹಾರ ಎಂದು ಹೇಳಿದ ಬೇರೆ

ಧರ್ಮದವರನ್ನು ವಿವಾಹವಾಗುವುದು. ವರದಕ್ಷಿಣೆ ಉಳಿದಿರುವುದು ನಂಬೂದರಿ ಜನಾಂಗದಲ್ಲಿ ಮತ್ತು ಮುಸ್ಲಿಮರಲ್ಲಿ ಮಾತ್ರ ಎನ್ನುವಂತಹ ವಿಚಾರವನ್ನು ಚರ್ಚಿಸುತ್ತಾರೆ. (*13)

ಸರುಮಾಳು ಮತ್ತು ಕೇಶವ್‌ನ ಪ್ರೀತಿಯನ್ನು ಸರುಮಾಳು ಪರೀಕ್ಷಿಸುತ್ತಾಳೆ ಇವರಿಬ್ಬರೂ ಸಹ ಬೇರೆ ಬೇರೆ ಧರ್ಮಗಳವರು ಹಿಂದೂ, ಕ್ರೈಸ್ಥ ಧರ್ಮಗಳು ಇವರಿಬ್ಬರ ಪ್ರೀತಿಗೆ ಹಾಗೂ ವಿವಾಹಕ್ಕೆ ಧರ್ಮವು ಯಾವ ರೀತಿಯಲ್ಲಿ ತೊಂದರೆ ಉಂಟುಮಾಡುತ್ತದೆ ಮತ್ತು ಸಮಾಜದಲ್ಲಿ ನಮ್ಮ ಸ್ಥಾನ–ಮಾನದ ಬಗ್ಗೆಯೂ ಆಲೋಚಿಸುತ್ತಾರೆ ಹೊಸಧರ್ಮ ಅನುಸರಿಸಿದಾಗ ಉಂಟಾಗುವ ಸಮಸ್ಯೆಗಳ ಸಾಧ್ಯತೆಯನ್ನು ಚರ್ಚೆಯ ಮೂಲಕ ಅನುಸರಿಸುತ್ತಾರೆ.

ದೇವಸ್ಥಾನ, ಚರ್ಚುಗಳೆಂಬ ಧಾರ್ಮಿಕ ಸಂಘರ್ಷ, ಗೊಂದಲಗಳು ಸೃಷ್ಟಿಯಾಗುತ್ತದೆ. ಈಗ ನಾವಿಬ್ಬರೂ ಯಾವ ಧರ್ಮಕ್ಕೆ ಪ್ರಾಮುಖ್ಯತೆ ಕೊಡಬೇಕೆಂಬ ಗೊಂದಲ ಆತಂಕ ಉಂಟಾಗುತ್ತದೆ, ಪ್ರೀತಿಯ ಮುಂದೆ ಈ ಧರ್ಮ, ಜಾತಿಗಳು ನಗಣ್ಯವಾದವು ಎಂಬ ತೀರ್ಮಾನಕ್ಕೆ ಬರುತ್ತಾರೆ, ಧರ್ಮ, ಜಾತಿ, ಹಾಗೂ ಚರ್ಚು, ದೇವಸ್ಥಾನ ಎಂಬಂತಹವು ನಮ್ಮ ಪ್ರೀತಿಗೆ ಅಡ್ಡಿತರುತ್ತವೆ ಎಂದಾದರೆ ನಮಗೆ ಅವುಗಳ ಅಗತ್ಯವೇ ಬೇಡ ಹಾಗೇ ಬದುಕಬಹುದೆಂಬ ನಿರ್ಧಾರವನ್ನು ತೆಗೆದುಕೊಳ್ಳುತ್ತಾರೆ.

ಮುಂದಿನ ಪೀಳಿಗೆ ಅಥವಾ ಮಕ್ಕಳಿಗೆ ಸಂಬಂಧಿಸಿದಂತೆ ಯಾವ ರೀತಿಯ ನಿರ್ಣಯ ತೆಗೆದುಕೊಳ್ಳಬೇಕೆಂದು ಯೋಚಿಸುತ್ತಾರೆ ಎಲ್ಲಾ ಧರ್ಮವೂ ಒಂದೇ ಅವರಿಗೆ ಧರ್ಮದ ಅಗತ್ಯ ಇದೆ ಎಂದಾದರೆ ಅವರೇ ಅದನ್ನು ನಿರ್ಣಯಿಸಬೇಕೆಂಬ ಆದರ್ಶದ ನುಡಿಗಳನ್ನು ಕಾಣಬಹುದು.

ಇಲ್ಲಿ ಮತ್ತೊಂದು ಜಿಜ್ಞಾಸೆ ಉಂಟಾಗುತ್ತದೆ ಅದೇನೆಂದರೆ ಹುಟ್ಟುವ ಮಗು ಗಂಡಾದರೆ ಯಾವ ಧರ್ಮದ ಹೆಸರನ್ನು ಇಡಬೇಕೆಂದು ಮತ್ತೆ ಗೊಂದಲ ಸೃಷ್ಟಿಯಾಗುತ್ತದೆ. ಅವರಿಗೆ ಅವರದೇ ಆದಂತಹ ಧಾರ್ಮಿಕ ನಂಬಿಕೆ, ವಿಶ್ವಾಸವಿರುತ್ತದೆ, ಯಾವ ಧರ್ಮಕ್ಕೂ ಸಂಬಂಧಿಸಿರದ ಹೆಸರನ್ನು ಇಡಬೇಕೆಂಬ ನಿರ್ಧಾರಮಾಡುತ್ತಾರೆ, ಹೀಗೆ ಈ ಕತೆಯಲ್ಲಿ ಅನೇಕ ರೀತಿಯಾಗಿ ಧರ್ಮ, ಜಾತಿಗಳಿಗೆ ಸಂಬಂಧಿಸಿದ ವಿಚಾರಗಳು ವೈಕಂ ಕತೆಗಳಲ್ಲಿ ಕಂಡುಬರುವುದು ಹಿಂದೂ ಧರ್ಮ, ಕ್ರೈಸ್ತಧರ್ಮ ಇವುಗಳ ನಿಯಮಗಳನ್ನು ಬಿಟ್ಟು, ಯಾವುದು ಶ್ರೇಷ್ಟ ಕನಿಷ್ಟವೆಂಬ ಭಾವನೆ ಇಲ್ಲದೆ ಎಲ್ಲ ಧರ್ಮವೂ ಒಂದೇ ಎಂಬ ಅಂಶವನ್ನು ಸಾರುತ್ತದೆ ಮತ್ತು ಧರ್ಮವೇ ಬೇಡವೆಂಬಂತಹ ನಿರ್ಧಾರಕ್ಕೆ ಬರುವಂತಹದ್ದನ್ನು ಕಾಣಬಹುದು.

ಧರ್ಮವೇ ಇಲ್ಲದ ಸಮಾಜ ಸೃಷ್ಟಿ ಹಾಗೂ ಮಾನವರೆಲ್ಲ ಒಂದೇ ಎಂಬಂತಹ ಭಾವನೆಯನ್ನು ಮೂಡಿಸುವಂತಹ ಪ್ರಯತ್ನ ಅವರ ಕತೆಯನ್ನು ಅಭ್ಯಸಿದಾಗ ತಿಳಿದುಬರುತ್ತದೆ.

"ಗೋಡೆಗಳು" ಈ ಕತೆಯಲ್ಲಿ ಹಿಂದು ಮತ್ತು ಮುಸ್ಲಿಂ ಧರ್ಮಕ್ಕೆ ಸೇರಿದ ಇಬ್ಬರು ಪ್ರೇಮಿಗಳು ಕಂಡು ಬರುತ್ತಾರೆ. ಜೈಲಿನಲ್ಲಿ ಇವರಿಬ್ಬರಿಗೆ ಅಡ್ಡಿಯಾಗಿದ್ದು ಒಂದು ಗೋಡೆ ಅದೇ ರೀತಿ ಇವರ ಪ್ರೀತಿಗೂ ಧರ್ಮವೆಂಬ ಮಹಾಗೋಡೆ ಸಂಘರ್ಷಕ್ಕೆ ಎಡೆಮಾಡತೊಡಗಿತು, ನಾರಾಯಣಿ ಎಂಬುವವಳಿಗೆ ಗೊತ್ತಿತ್ತು ನಮ್ಮ ಪ್ರೀತಿ ಫಲಿಸಬೇಕಾದರೆ ಅಥವಾ ಮಾನ್ಯವಾಗಬೇಕಾದರೆ ಇಬ್ಬರೂ ಒಂದೇ ಧರ್ಮಕ್ಕೆ ಸೇರಿದವರಾಗಬೇಕೆಂಬ ಕಲ್ಪನೆ ಅವಳಲ್ಲಿತ್ತು, ಆದರೆ ಈ ವಿಚಾರವನ್ನು ಬಷೀರ್ ಜೊತೆಯಲ್ಲಿ ಚರ್ಚೆ ನಡೆಸಿದಾಗ ಇವಳಿಗೆ ಧೈರ್ಯ ಬರುತ್ತದೆ ಪ್ರೀತಿಗೆ ಯಾವುದೇ ಜಾತಿ, ಧರ್ಮವಾಗಲಿ ಅಡ್ಡಿಪಡಿಸುವುದಿಲ್ಲ, ಪ್ರೀತಿ ಎನ್ನುವಂತಹದ್ದು ಮನಸ್ಸಿಗೆ ಸಂಬಂಧಿಸಿದ್ದೇ ಹೊರತು ಧರ್ಮ, ಜಾತಿಯಾಗಲಿ ಇದಕ್ಕೆ ಹೊಣೆಯಲ್ಲ ಎಂಬ ವಿಚಾರ ಈ ಕತೆಯಿಂದ ತಿಳಿದುಬರುತ್ತದೆ. *14

"ಪ್ರೇಮಪತ್ರ ಮತ್ತು ಗೋಡೆಗಳು" ಎಂಬ ಕತೆಗಳಲ್ಲಿ ಕಂಡುಬರುವಂತಹ ವಿಚಾರ ಎಂದರೆ ಗಂಡು ಹೆಣ್ಣು ಇಬ್ಬರಲ್ಲೂ ಪ್ರೀತಿ ಹುಟ್ಟಿದ ಮೇಲೆ ಧರ್ಮ, ಜಾತಿಗಳು ಎಂದು ಯೋಚಿಸುತ್ತಾರೆ ಆದರೆ ಪರಿಶುದ್ಧವಾದ ಪ್ರೀತಿಗೆ ಯಾವುದೇ ಅಡ್ಡಿ ಅಡೆತಡೆಗಳು ಮುಖ್ಯ ಎನಿಸುವುದಿಲ್ಲ.

ಧರ್ಮ–ಜಾತಿಗಳಲ್ಲಿ ಬೇರೆ ಧರ್ಮವನ್ನು ಒಪ್ಪುವುದೋ ಬಿಡುವುದೋ ಎಂಬಂತಹ ತಾಕಲಾಟ, ಗೊಂದಲಗಳು ಉಂಟಾಗುತ್ತವೆ, ಅದಕ್ಕೆ ಬಷಿರ್ ಕತೆಗಳಲ್ಲಿ ಕಂಡುಬರುವಂತಹದ್ದು ಹೆಣ್ಣು ಗಂಡು ಇಬ್ಬರೂ ಸೇರಿ ಒಂದು ನಿರ್ಣಯ ತೆಗೆದುಕೊಳ್ಳುವಂತೆ ಅಂದರೆ ಧರ್ಮಕ್ಕೆ ವಿರುದ್ಧವಾದ ನಿರ್ಣಯ ತೆಗೆದುಕೊಳ್ಳುವಂತದ್ದು ಇಂದಿನ ಸಮಾಜದಲ್ಲಿಯೂ ಸಹ ಯುವ ಪ್ರೇಮಿಗಳು ಇಂತಹ ಇಕ್ಕಟ್ಟಿನ ಇಬ್ಬಂದಿತನಕ್ಕೆ ಒಳಗಾಗಿರುತ್ತಾರೆ. ಸರಿಯಾದ ನಿರ್ಧಾರ ತೆಗೆದುಕೊಳ್ಳಲಾಗದೆ ದೂರವಾಗುವಂತಹ ಇಲ್ಲ ಆತ್ಮಹತ್ಯೆಗೆ ಶರಣಾಗುವಂತಹ ಸಂಧರ್ಭಗಳೇ ಹೆಚ್ಚಾಗಿ ಕಂಡುಬರುತ್ತದೆ ಧರ್ಮ, ಜಾತಿಗೆ ಪ್ರಾಮುಖ್ಯತೆ ನೀಡುವಂತಹ ವಿಚಾರಗಳು

ಧರ್ಮ ಜಾತಿಯು ಹಾಕಿಕೊಟ್ಟಿರುವ ನಿಯಮ, ಚೌಕಟ್ಟಿನಲ್ಲೇ ನಡೆಯಬೇಕೆಂದು ಯಾವ ಯೋಚನೆಯೂ ಬಾರದ ಹಾಗೆ ನಮ್ಮನ್ನು ಬಂಧಿಸಿರುತ್ತವೆ ನಮ್ಮನ್ನು ಆಳುವ ಶಕ್ತಿ ಎಂದರೆ ಧರ್ಮ, ಜಾತಿಗಳು ಇಂತಹ ಪರಿಕಲ್ಪನೆಯು ಬದಲಾಗಬೇಕೆಂಬ ಆಶಯ, ತುಡಿತ ವೈಕಂ ಮಹಮ್ಮದ್ ಬಷೀರ್‌ರವರಲ್ಲಿದ್ದಂತಹ ಮನೋಭಾವವಾಗಿದೆ ಎಂಬುದನ್ನು ನನ್ನ ಅಧ್ಯಯನದ ಮೂಲಕ ಪರಿಶೀಲಿಸಿದ್ದಾನೆ. *15

"ವಾರಸುದಾರರು ಮತ್ತು ಶಬ್ದಗಳು" ಎಂಬ ಕತೆಯಲ್ಲಿ ಮುಖ್ಯವಾಗಿ ಕಂಡು ಬರುವಂತಹ ವಿಚಾರಗಳೆಂದರೆ ನಂಬಿಕೆ, ಸಂಪ್ರದಾಯ, ಧರ್ಮ, ಆಚರಣೆ, ಕಟ್ಟುಪಾಡುಗಳು ಇವುಗಳನ್ನು ಮೀರಲು ಸಾಧ್ಯವಾಗದೇ ಇರುವಂತಹ ಸ್ಥಿತಿಯನ್ನು ನಾವು 'ವಾರಸುದಾರರು' ಎಂಬ ಕತೆಯಲ್ಲಿ ಕಾಣುತ್ತೇವೆ.

ಆಧುನಿಕತೆಯ ಪ್ರವೇಶದಲ್ಲಿಯೂ ಸಹ ಕೆಲವು ಮೂಡನಂಬಿಕೆಗಳ ಆಚರಣೆ ಮಾಡುವುದು ಹಾಗೂ ಅವುಗಳ ಬಗ್ಗೆ ನಂಬಿಕೆ ಇಟ್ಟುಕೊಂಡಿರುವಂತದ್ದು ವೈಚಾರಿಕತೆಗೆ ಹೊಂದಿಕೊಳ್ಳಬೇಕು ಅಥವಾ ಸಂಪ್ರದಾಯಕ್ಕೆ ಬದ್ದರಾಗಿರಬೇಕಾ? ಎಂಬಂತಹ ಗೊಂದಲಮಯ ಸಂದರ್ಭಗಳು ಉಂಟಾಗುತ್ತವೆ, ಬಾವಲಿಗಳು ಪೂರ್ವಜರ ಆತ್ಮಗಳು ಎಂದು ಪೂಜಿಸುವಂತಹ ಸ್ಥಿತಿ ಈ ಕತೆಯಲ್ಲಿ ಕಂಡುಬರುತ್ತದೆ.

ನಾವು ಶಿಕ್ಷಿತರಾಗಿದ್ದೇವೆ ಎಂದು ಬೇರೆಯವರ ನಂಬಿಕೆ, ಮೌಲ್ಯಗಳಿಗೆ ನಾವು ದಕ್ಕೆ ಉಂಟಾಗದಂತೆ ಕಾಪಾಡಿಕೊಳ್ಳಬೇಕು, ನಾವು ತಿಳಿದಿರುವುದು ನಮಗೆ ಹೆಚ್ಚಾದರೆ, ಬುಡಕಟ್ಟು ಜನಾಂಗದ ಸಂಪ್ರದಾಯ, ಆಚರಣೆಗಳು ಅವರಿಗೆ ಮುಖ್ಯವಾಗಿರುತ್ತದೆ, ಈ ರೀತಿಯಾಗಿ ಸಮಾಜದಲ್ಲಿ ಸರಿಯಾದ ನಿರ್ಣಯ ತೆಗೆದುಕೊಳ್ಳುವುದು ಕಷ್ಟವಾಗುತ್ತದೆ. ಮುಂದೆ ಇದೇ ವಿಚಾರವು ಘರ್ಷಣೆಗಳಿಗೆ ಕಾರಣವಾಗುತ್ತದೆ ಯಾವ ಧರ್ಮ ಮೇಲಲ್ಲ, ಯಾವ ಧರ್ಮ ಆಚರಣೆಯು ಕೀಳಲ್ಲ ಎನ್ನುವಂತಹ ಅಂಶವನ್ನು ವೈಕಂರವರು ತಮ್ಮ ಕತೆಯ ಮೂಲಕ ತಿಳಿಸಿದ್ದಾರೆ.

“ಶಬ್ದಗಳು” ಎಂಬ ಕತಾ ಭಾಗದಲ್ಲಿ ಸಂಪ್ರದಾಯ ಬದ್ದ ವೈದಿಕನಾಗಿದ್ದು, ದೇವಾಲಯದಲ್ಲಿ ಪೂಜೆ ಮಾಡಿಕೊಂಡು ಇದ್ದಂತಹ ವ್ಯಕ್ತಿಯು ಧರ್ಮದ ಕಟ್ಟು ಕಟ್ಟಲೆಗಳನ್ನು ಮೀರಿ ಒಬ್ಬ ಅನಾಥ ಮಗುವನ್ನು ಸಾಕುವಂತಹ ಮನಸ್ಥಿತಿ ಅವನಲ್ಲಿದೆ ಎಂಬ ವಿಚಾರವನ್ನು ಬಷೀರ್‌ರವರು ಚಿತ್ರಿಸಿದ್ದಾರೆ.

ವೇದ, ಶಾಸ್ತ್ರ, ಪುರಾಣವನ್ನು ಪಠಿಸುವ ವ್ಯಕ್ತಿ ಯಾರೋ ಅನಾಥ ಮಗುವಿನ ರಕ್ಷಣೆಗೆ ಮುಂದಾಗುತ್ತಾರೆ ಆಮಗು ಯಾವ ಧರ್ಮ?, ಜಾತಿ,? ಯಾವ ವಂಶ? ಇತ್ಯಾಧಿ ಯಾವುದನ್ನೂ ಸಹ ಲೆಕ್ಕಿಸದೆ ವ್ಯವಸ್ಥೆಯ ವಿರುದ್ಧವಾಗಿ ಹೋಗಿ ಮಗುವನ್ನು ಸಾಕುತ್ತಾರೆ, ವೈದಿಕ ಪರಂಪರೆಯ ವ್ಯಕ್ತಿಯಾಗಿ ಇಂತಹ ಬದಲಾವಣೆಯನ್ನು ವೈಕಂ ಮುಂದಿನ ಆದರ್ಶ ಸಮಾಜವನ್ನು ಕಾಣುವ ಆಶಯ ವ್ಯಕ್ತವಾಗಿದೆ.

ಧಾರ್ಮಿಕ ಹಿನ್ನೆಲೆಯಲ್ಲಿ ಆಲೋಚಿಸುವುದಾದರೆ ವೈದಿಕ ಪರಂಪರೆಯನ್ನು ಅನುಸರಿಸುತ್ತಾ ಬಂದಂತಹ ವ್ಯಕ್ತಿಗೂ ಕೂಡ ಸಮಾಜದಿಂದ ಅನೇಕ ಆರೋಪಗಳು ಬರತೊಡಗಿದವು, ಬೇರೆ ಜಾತಿ, ಧರ್ಮ ಹಾಗೂ ವಿವಾಹಕ್ಕೂ ಮುಂಚೆ ಹುಟ್ಟಿದಂತಹ ಮಗುವಾಗಿದ್ದರಿಂದ ಅದರ ಬಗ್ಗೆ ಸಮಾಜದಲ್ಲಿ ಮತ್ತು ಪೋಲೀಸಿನವರಿಗೆ ದೂರನ್ನು ನೀಡಿದಾಗಲೂ ಸಹ ಯಾವುದೇ ಕ್ರಮವನ್ನು ತೆಗೆದುಕೊಳ್ಳಲಿಲ್ಲ ಕಾರಣ ಯಾವುದೇ ಅನಾಥ ಮಗು ಎಂಬಂತಹ ವಿಚಾರದಿಂದ ಈ ವಿಷಯದಲ್ಲಿ ಎಲ್ಲರಿಗೂ ನಿರ್ಲಕ್ಷ್ಯ ಮನೋಭಾವ.

ಯಾವುದೇ ಮಗುವನ್ನು ನಮ್ಮ ಜಾತಿಯ ಪರಿದಿಗೆ ಯಾಕೆ ಮತ್ತು ಹೇಗೆ ಸೇರಿಸಿಕೊಳ್ಳುವುದೆಂಬಂತಹ ವಿಭಿನ್ನ ಆಲೋಚನೆಗಳನ್ನು ಸಹ ಲೆಕ್ಕಿಸದೆ ಮನುಷ್ಯ ಜಾತಿ ತಾನೊಂದು ಒಲವಂ ಎಂಬ ನಿರ್ಣಯ ಪಡೆಯುವುದನ್ನು ಇಲ್ಲಿ ಕಾಣಬಹುದು ಧರ್ಮದ ಎಲ್ಲ ಕಟ್ಟು ಪಾಡುಗಳನ್ನು ವಿರೋಧಿಸುವಂತದ್ದು. *16

ನೈತಿಕತೆ ಅನ್ನೋದು ಧರ್ಮದಿಂದ ಧರ್ಮಕ್ಕೆ ಭಿನ್ನವಾಗಿರುತ್ತದೆ ಈಗ ಏಕ ಪತಿತ್ವ ಅಥವಾ ಏಕ ಪತ್ನಿತ್ವಾನೇ ತೆಗೆದುಕೊಳ್ಳವುದಾದರೆ, ಕೆಲವು ಧರ್ಮಗಳು ಇದನ್ನು ಒಪ್ಪಿಕೋತಾವೆ ಮತ್ತೆ ಕೆಲವು ಧರ್ಮಗಳು ಬಹುಪತ್ನಿತ್ವಾನ ಒಪ್ಪಿಕೊತಾವೆ ಒಂದೊಂದು ಧರ್ಮ ಒಂದೊಂದು ಅರ್ಥದಲ್ಲಿ ವಿವಾಹಕ್ಕೆ ಸಂಬಂಧಿಸಿದಂತೆ ಹೇಳುತ್ತದೆ ಎಲ್ಲವೂ ಗೊಂದಲ ಅಪರಿಪಕ್ವವಾದದ್ದು.

ಹೀಗೆ ವೈಕಂ ಬಷೀರ್‌ರವರು ಅಂದಿನ ಸಮಾಜ ಮತ್ತು ಮುಂದಿನ ದಿನಗಳನ್ನು ಆಧಾರವಾಗಿಟ್ಟುಕೊಂಡು ಪೂರ್ವಭಾವಿಯಾದಂತಹ ಆಲೋಚನೆ, ಧಾರ್ಮಿಕ ಸ್ಥಿತಿ–ಗತಿಗಳು, ಮನುಷ್ಯನನ್ನು ಯಾವ ರೀತಿ ತನ್ನ ಹಿಡಿತವನ್ನು ಸಾಧಿಸುತ್ತವೆ ಎಂಬಂತಹ ವಿಚಾರಗಳು ಕಂಡುಬರುತ್ತವೆ ಇವರ ಕತೆಗಳಲ್ಲಿನ ವಿಷಯ ಘಟನೆಗಳು ಬಹಳ ತಾತ್ವಿಕವಾದ ನೆಲೆಯಲ್ಲಿ ರಚಿತಗೊಂಡಿದೆ ಎಂಬಂತಹ ವಿಚಾರವನ್ನು ನನ್ನ ಅಧ್ಯಯನದ ಮೂಲಕ ಪರಿಶೀಲಿಸಿದ್ದೇನೆ.

ಮಾನವೀಯ ಮೌಲ್ಯಗಳನ್ನು ಸಾರುವುದು ಎಲ್ಲಾ ಸಾಹಿತ್ಯದ ಮೂಲ ಉದ್ದೇಶವೂ ಆಗಿದೆ, ವೈಕಂ ಕತೆಗಳಲ್ಲಿಯೂ ಈ ಅಂಶ ಸಹಜವಾಗಿದೆ, ಆದರೆ ವೈಕಂ ಕತೆಗಳ ವಿಶಿಷ್ಟತೆ ಇರುವುದು ಬಡತನದೊಳಗಿನ ಅನುಭವವನ್ನು ತಾನು ಅನುಭವಿಸಿ ಅದನ್ನು ಅತ್ಯಂತ ಲಘುಹಾಸ್ಯದಾಟಿಯಲ್ಲಿದೆ. ನಿರೂಪಿಸುವುದು ನಮ್ಮ ಸುತ್ತಲಿನ ಪರಿಸರದಲ್ಲಿ ಬಂಗಾರಿ, ಬಿಕ್ಷುಕ, ಹೀಗೊಬ್ಬ ಮನುಷ್ಯ, ಶಿಕ್ಷಕ, ಹೀಗೆ ಹಲವು ಪಾತ್ರಗಳನ್ನು ನೋಡಬಹುದು.

ಕನ್ನಡ ಸಾಹಿತ್ಯದಲ್ಲಿ ಸಿದ್ದಲಿಂಗಯ್ಯನವರ ಬರವಣಿಗೆ ಅದರಲ್ಲೂ ಊರು–ಕೇರಿ ಕೃತಿಗಳಲ್ಲಿ ಕಥನದಂತೆ ಸರಳವಾಗಿ, ಲಘುದಾಟಿಯಲ್ಲಿ ಆದರೆ ಎಲ್ಲರಿಗೂ ಅರ್ಥವಾಗುವಂತೆ ಬರೆಯುವ ಅವರ ಶೈಲಿಯಂತೆ ವೈಕಂ ಶೈಲಿಯು ಸಹಜವಾಗಿ ಓದುಗರನ್ನು ಸೆಳೆಯುತ್ತದೆ.

"ಒಂದು ಹಳೆಯ ಪ್ರೇಮಕತೆ" ಎಂಬ ಕತೆಯಲ್ಲಿ ಸಮಾಜವಾದಿ ಯುವಕ ಮತ್ತು ಒಂದು ಸಂಪ್ರದಾಯಸ್ಥ ಹಾಗೂ ಮಾರ್ಯಾದಸ್ಥ ಕುಟುಂಬದ ಚಿತ್ರಣ ಇಲ್ಲಿ ಒಂದು ಸಂಪ್ರದಾಯಿಕ ಚೌಕಟ್ಟಾಗಿ ನಮಗೆ ಕಂಡುಬರುತ್ತದೆ.

ಈ ಯುವಕ ಸಮಾಜ ಸುಧಾರಣೆಯ ಚಳುವಳಿಯಲ್ಲಿರುವವನು. ಅಂದರೆ, ಇವನು ಯಾವುದೇ ನಂಬಿಕೆ, ಧರ್ಮ, ಜಾತಿ, ಮತಗಳಿಗೆ ಬೆಲೆ ಕೊಡದೆ ಸಮಾಜದಲ್ಲಿ ಸಮಾನತೆ ಪರಿವರ್ತನೆಯೇ ತನ್ನ ಮುಖ್ಯ ಉದ್ದೇಶವನ್ನಗಿಟ್ಟುಕೊಂಡಿರುವಂತದ್ದು ಕಂಡುಬರುತ್ತದೆ. ಇದಕ್ಕೆ ವಿರುದ್ಧವಾಗಿ ಸಂಪ್ರದಾಯಸ್ಥ ಕುಟುಂಬದ ಚಿತ್ರಣವನ್ನು ಕೊಡುತ್ತಿದ್ದಾರೆ. ಅಂದರೆ ಮನುಷ್ಯನನ್ನು ಈ ಸಂಪ್ರದಾಯ, ಆಚರಣೆಗಳು, ಧರ್ಮ, ಇವು ನಮ್ಮನ್ನು ಆಳ್ವಿಕೆ ಮಾಡುತ್ತವೆ. ನಾವು ಅವುಗಳಿಗೆ ದಾಸರಾಗಬಾರದು. ಎನ್ನುವಂತಹ ನಿಲುವನ್ನು ಸಹ ಕತೆ ಪ್ರತಿಧ್ವನಿಸುತ್ತಿರುವಂತಹ ವಿಚಾರ ತಿಳಿದುಬರುತ್ತದೆ. *17

ಸಂಪ್ರದಾಯಸ್ಥ ಮನೆಯ ಹೆಣ್ಣಿನ ಮೇಲೆ ಈ ಯುವಕನಿಗೆ ಮೋಹ/ ಪ್ರೀತಿ ಉಂಟಾಗುತ್ತದೆ. ಇದಕ್ಕೆ ದೊಡ್ಡ ಅಡ್ಡಗೋಡೆಯ ರೀತಿ ಕಂಡುಬರುವಂತದ್ದು, ಕೊನೆಗೆ ಧರ್ಮವನ್ನು, ಸಂಪ್ರದಾಯದ ಚೌಕಟ್ಟನ್ನು ಮೀರಲಾಗದಂತಹ ಈ ಸನ್ನಿವೇಶವನ್ನು ಕತೆಯು ಒಳಗೊಂಡಿದೆ.

ಸಮಾಜ ಸುಧಾರಣವಾದಿ ಯುವಕನ ಪ್ರಕಾರ "ಪ್ರೇಮಕ್ಕೆ ಮೇಲು-ಕೀಳು, ಬಡವ ಬಲ್ಲಿದ, ಗುಡಿಸಲು – ಅರಮನೆ ಅನ್ನೋ ಯಃಕಶ್ಚಿತ್ ಚಿಲ್ಲರೆ ಧೋರಣೆ? ಪ್ರೇಮ, ಅಮರ, ನಿರಂತರ ಪವಿತ್ರ," ಎನ್ನುವಂತಹ ಆಶಾಭಾವನೆಯನ್ನು ಇಟ್ಟುಕೊಂಡಿರುವಂತಹ ವ್ಯಕ್ತಿಯಾಗಿ ನಮಗೆ ಈ ಕತೆಯಲ್ಲಿ ಕಂಡುಬರುತ್ತನೆ.

ವೈಕಂ ಬಷೀರ್‌ರವರ ಕತೆಗಳಾದ

- ❖ ಪೇಮಪತ್ರ
- ❖ ಒಂದು ಹಳೆಯ ಪ್ರೇಮಕತೆ
- ❖ ವಾರಸುದಾರರು
- ❖ ಶಬ್ದಗಳು

ಈ ಮೇಲಿನ ನಾಲ್ಕು ಕತೆಗಳಲ್ಲಿ ಧಾರ್ಮಿಕ ಸಂಘರ್ಷಕ್ಕೆ ಸಂಬಂಧಿಸಿದಂತಹ ವಿಚಾರಗಳು ಬೆಳಕಿಗೆ ಬರುತ್ತವೆ. ಧರ್ಮವನ್ನು, ಸಂಪ್ರದಾಯವನ್ನು ಮೀರಲಾಗದೆ ತಮ್ಮ – ತಮ್ಮಲ್ಲಿಯೇ ತಿಕ್ಕಾಟ, ಘರ್ಷಣೆ, ಸಂಘರ್ಷಗಳು, ಕೋಮುಗಲಬೆ ಮುಂತಾದವುಗಳನ್ನು ಅವರು ತಮ್ಮ ಕತೆಗಳ ಮೂಲಕ ಹಿಡಿದಿಟ್ಟಿದ್ದಾರೆ. ಇಂತಹ ಸೂಕ್ಷ್ಮ ಸಂಗತಿಗಳನ್ನು ಸಮಾಜವನ್ನು ಬಹುಮುಖ ಆಯಾಮದಿಂದ ನೋಡುವಂತಹ ಮನೋಭಾವ ಇವರ ಕತೆಗಳಲ್ಲಿ ಕಾಣಬಹುದು.

ಇಂದಿನ ಕಾಲಕ್ಕೂ ಸಹ ಇವರ ಕತೆಗಳು ಪ್ರಸ್ತುತೆತೆಯನ್ನು ಪಡೆಯುತ್ತವೆ ಎನ್ನುವುದರಲ್ಲಿ ಸಂದೇಹವೇ ಇಲ್ಲ. ಅಂದರೆ 21ನೇ ಶತಮಾನದ ಊಹೆ/ಕಲ್ಪನೆಯನ್ನುಅಥವಾ ಮುಂದಾಲೋಚನೆಯನ್ನು ಸಹ ಇವರ ಕತೆಗಳಲ್ಲಿ ವಾಸ್ತವತೆಯನ್ನು ಕಾಣಬಹುದು 19 ನೇ ಶತಮಾನದ ವ್ಯಕ್ತಿ ಇಂತಹ ಸಮಾಜದ ಬಗ್ಗೆ ಇರುವಂತಹ ಆಲೋಚನೆಗಳನ್ನು ಹೊಂದಿರುವಂತದ್ದು ನಿಜಕ್ಕೂ ಶ್ಲಾಘನೀಯವಾದದ್ದು. ಈ ಮೇಲಿನ ಎಲ್ಲ ವಿಚಾರಗಳಿಂದ ವೈಕಂ ರವರ ಕತೆಗಳಲ್ಲಿ ಧಾರ್ಮಿಕ ಸಂಘರ್ಷದ ನೆಲೆಯ ಎಲ್ಲಾ ವಿಚಾರಗಳನ್ನು ನನ್ನ ಅಧ್ಯಯನದಲ್ಲಿ ಸಂಶೋಧಿಸಿದ್ದೇನೆ.

**ಕೊನೆಟಿಪ್ಪಣಿ:**

*1. ಮಲಯಾಳಂನ ಶ್ರೇಷ್ಠ ಕತೆಗಳು (ಪುಟ 25–28)

*2. ಸಾಹಿತ್ಯ ಅಧ್ಯಯನ–7 ಕನ್ನಡ ಐಚ್ಛಿಕ ಪತ್ಯ ಬಿ.ಎ ( ಪುಟ 118–140)

*3. ಮಲಯಾಳಂನ ಶ್ರೇಷ್ಠ ಕತೆಗಳು (ಪುಟ 21–22)

*4. ವೈಕಂ ಕತೆಗಳು (ಪುಟ 48–60)

*5. ವೈಕಂ ಕತೆಗಳು (ಪುಟ 88–126)

*6. ವೈಕಂ ಕತೆಗಳು (ಪುಟ 127–145)

*7. ವೈಕಂ ಕತೆಗಳು (ಪುಟ 31–43) .

*8. . ವೈಕಂ ಕತೆಗಳು (ಪುಟ149–151)

*9. . ವೈಕಂ ಕತೆಗಳು (ಪುಟ 80–87)

*10. ವೈಕಂ ಕತೆಗಳು (ಪುಟ 68–71)

*11. . ವೈಕಂ ಕತೆಗಳು (ಪುಟ 72–79)

*12 (ವೈಕಂ ಕಥೆಗಳು ಎಸ್. ಗಂಗಾಧರಯ್ಯ ಮುನ್ನುಡಿ)

*13 (ವೈಕಂ ಕತೆಗಳು ಪು.ಸಂ 9)

*14. ವೈಕಂ ಕತೆಗಳು (ಪುಟ152)

*15. (ವೈಕಂ ಕತೆಗಳು 1–30, 180)

***16**. (ವೈಕಂ ಕತೆಗಳು– ಪುಟ97)

*17 (ವೈಕಂ ಕತೆಗಳು 61–67)

# ಅಧ್ಯಾಯ-4

# ವೈಕಂ ಮಹಮ್ಮದ್ ಬಷೀರ್ ರವರ ಕಥೆಗಳಲ್ಲಿನ ಸಾಮಾಜಿಕ ಬದಲಾವಣೆ, ಕೌಟುಂಬಿಕ ಸ್ಥಿತಿಗತಿ:-

## ಸಾಮಾಜಿಕ ಬದಲಾವಣೆ:-

ಬಷೀರ್ ರವರ ಕಥೆಗಳ ವಸ್ತು ವೈವಿಧ್ಯತೆ ಮತ್ತು ಆಶಯಗಳು ಎಂಥವರನ್ನು ಚಕಿತಗೊಳಿಸಿ ಬಿಡುತ್ತವೆ ಒಂದು ಕಥೆಯ, ಸಾಮಾಜಿಕ ವಲಯದ ಎಲ್ಲ ಕ್ಷೇತ್ರವನ್ನೂ ಸಹ ತಮ್ಮ ವೈಯಕ್ತಿಕ ಅನುಭವದ ಒಳಗಣ್ಣಿನಿಂದ ಕಂಡಂತಹ ಕಟುವಾಸ್ತವ ಸತ್ಯವನ್ನು ಓದುಗರೊಂದಿಗೆ ಬಿಚ್ಚಿಡುತ್ತಾರೆ. ಸಾಮಾಜವನ್ನು ಬಗ್ಗೆ ಬಹಳ ಹತ್ತಿರದಿಂದ ತಿಳಿದುಕೊಂಡಿದ್ದಂತಹ ವ್ಯಕ್ತಿಯಾಗಿ ಬಷೀರ್ ರವರು ಕಂಡುಬರುತ್ತಾರೆ.



ಬಡತನ, ಹಸಿವು, ನಿರುದ್ಯೋಗ, ಹುಸಿಕ್ರಾಂತಿಕಾರರು, ಕಳ್ಳರು, ಮೈಮಾರಿಕೊಳ್ಳುವ ಹಾಗೂ ಮನುಷ್ಯತ್ವವಿರುವ ಸೂಳೆಯರು, ನಪುಂಸಕರು, ರಾಷ್ಟ್ರೀಯತೆ ಪ್ರಜ್ಞೆ, ವರದಕ್ಷಿಣೆ, ಮುಗ್ದಜನಗಳು ಬದುಕು ಹೀಗೆ ಒಂದು ಸಾಮಾಜದ ಒಳಹೊಕ್ಕು ನೋಡುವಂತಹ ದೃಷ್ಟಿಕೊನ ಅವರಲ್ಲಿದ್ದರಿಂದ ಅವರ ಕೆತೆಗಳಲ್ಲಿ ಬದುಕಿನ ಅನೇಕ ಮುಖಗಳನ್ನು ಪರಿಚಯಿಸುವುದರಿಂದ ಅವರಿಗೆ ನೆರವಾಯಿತು ಮತ್ತು ತಮ್ಮ ಜೀವನದ ಅನುಭವವೂ ಇಲ್ಲಿ ಮಜಲುಗಳು, ಹಂತಗಳನ್ನು ಪರಿಚಯಿಸುತ್ತದೆ, ಕೆಲವು ಕತೆಗಳಂತು ಮ್ಯಾಜಿಕ್ ರಿಯಾಲಿಸಂ ತಂತ್ರವನ್ನು ಅನುಸರಿದೆ ಉದಾ: ಹೀಗೊಬ್ಬ ಮನುಷ್ಯ ಕೆಲವು ವಾಸ್ತವಿಕ ಕೆಲವು ಫ್ಯಾಂಟಸಿ ಹೀಗೆ ಅನೇಕ ರೀತಿಯ ತಂತ್ರಗಳನ್ನು ಒಳಗೊಂಡಿದೆ.

"ಜೀವನದ ಕರಿನೆರಳು" ಜನ್ಮದಿನ, ಸಂಜೆಯ ಪ್ರಾರ್ಥನೆ, ಶಬ್ದಗಳು" ಈ ಕತೆಗಳು ಸಾಮಾನ್ಯವಾಗಿ ಒಂದೇ ರೀತಿಯ ವಿಷಯ ವಸ್ತುವನ್ನು ಹೊಂದಿರುತ್ತವೆ ಜೀವನದ ವಿವಿಧ ಮಜಲುಗಳು, ನಿರುದ್ಯೋಗ ಸಮಸ್ಯೆ, ಹಸಿವು, ವೇಶ್ಯೆಯರ ಸಹವಾಸ ಇಂತಹ ವಸ್ತು ವಿಷಯದ ಸುತ್ತ ನಡೆಯುತ್ತಿರುತ್ತವೆ.

ಜೀವನದ 'ಕರಿನೆರಳು' ಒಬ್ಬ ಕತೆಯಲ್ಲಿ ಅಬ್ಬಾಸ್ ಒಬ್ಬ ಶ್ರೀಮಂತನಾಗಿದ್ದ ವ್ಯಕ್ತಿ ಹಣದ ಮೋಜಿನ ಜೀವನದ ಚಿತ್ರಣವೂ ಇದೆ ಮತ್ತೆ ಅದೇ ವ್ಯಕ್ತಿ ಮತ್ತೆ ತನ್ನ ಜೀವನದಲ್ಲಿ ಆದಂತಹ ಸೋಲಿನಿಂದ ಅವನ ಸ್ಥಿತಿಯಲ್ಲಾದ ಬದಲಾವಣೆಯನ್ನು ಕುರಿತು ಈ ಕತೆ ತಿಳಿಸುತ್ತದೆ. ಕೊನೆಗೆ

ಇವನು ಭಿಕಾರಿಯ ಸ್ಥಿತಿಯನ್ನು ತಲುಪುತ್ತಾನೆ ಯಾವುದೇ ಉದ್ಯೋಗವಿಲ್ಲದೆ ಇವನು ಊಟವಿಲ್ಲದೆ, ಹಸಿವಿನಿಂದ ನರಳುವಂತಹ ಸ್ಥಿತಿಯನ್ನು ತಲುಪುತ್ತಾನೆ. ಮನೆಯ ಮಾಲೀಕನು ಇವನನ್ನು ಮನೆಯಿಂದ ಹೊರಹಾಕುವಂತೆ ಎಚ್ಚರಿಕೆ ಕೊಡುತ್ತಾನೆ ಅಲ್ಲಿದ್ದ ಪ್ರದೇಶದ ಎಲ್ಲಾ ಹೆಂಗಸರು ವೇಶ್ಯಾವೃತ್ತಿಯನ್ನು ಅನುಸರಿಸುತ್ತಿದ್ದವರು ಅದರ ಒಂದು ಪರಿಣಾಮವೂ ಸಹ ಈ ಅಬ್ಬಾಸ್‌ನನ್ನು ಅನೇಕ ರೀತಿಯಾಗಿ ಪರಿತಪ್ಪಿಸುವಂತೆ ಮಾಡುವ ಕಳ್ಳತನದ ಆರೋಪವನ್ನು ಹೊರಬೇಕಾದಂತಹ ಸ್ಥಿತಿ ಬರುತ್ತದೆ. ಅಂದರೆ ಮಾನವನು ತನ್ನ ಬದುಕಿನ ಸುತ್ತ ನಡೆಯುವಂತಹ ಈ ಆಟದ ಬಗ್ಗೆ ಅವನು ಮಾನವನು ತನ್ನ ಬದುಕಿನ ಸುತ್ತ ನಡೆಯುವಂತಹ ಈ ಆಟದ ಬಗ್ಗೆ ಅವನಿಗೆ ಅರಿವಿಲ್ಲದಂತೆ ಅನೇಕ ಅಪಾಯದ ಸ್ಥಿತಿಗಳು ಎದುರಾಗುತ್ತವೆ, ಎಂಬಂತಹ ವಿಚಾರವನ್ನು ಸಹ ವೈಕಂರವರು ತಮ್ಮ ಕತೆಯಲ್ಲಿ ವಿವರಿಸಿದ್ದಾರೆ. ಈ ಅಬ್ಬಾಸ್‌ನ ಜೀವನದದಲ್ಲಿ ವಸಂತಕುಮಾರಿ ಎಂಬ ಸೂಳೆಯ ಪ್ರವೇಶವಾಗುತ್ತದೆ ಆ ಹೆಣ್ಣು ದಿನಾವೂ ಇವನನ್ನು ನೋಡುವುದು ಮೋಹಿಸುವುದು, ಅದನ್ನು ಅವಳಲ್ಲಿದಂತಹ ಮುಗ್ದ ನೋಟವನ್ನು ಈ ಅಬ್ಬಾಸ್ ತಪ್ಪಾಗಿ ಅರ್ಥೈಸುತ್ತಿದ್ದನು ಅವಳಿಂದ ದೂರವಾದನು ಆದರೆ ಆ ಹೆಣ್ಣನ್ನೇ ಕೊನೆಗೆ ಇವನು ಮದುವೆಯಾಗುವಂತಹ ಸ್ಥಿತಿಯನ್ನು ಕಾಣಬಹುದು. ಅವಳ ಜೀವನಕ್ಕೆ ಆ ವೃತ್ತಿ ಅನಿವಾರ್ಯವಾಗಿರಬಹುದು. ಅದನ್ನು ತಪ್ಪು ಎಂದು ತಿಳಿಯುವುದಕ್ಕೆ ನಮ್ಮಿಂದ ಸಾಧ್ಯವಿಲ್ಲ ಎನ್ನುವಂತಹ ಸೂಕ್ಷ್ಮ ವಿಚಾರವನ್ನು ತಿಳಿಸುತ್ತಾ, ಕೊನೆಗೆ ಆ ಹೆಣ್ಣಿಗೆ ಅಬ್ಬಾಸ್‌ನೇ ಬಾಳನ್ನು/ಜೊತೆಗಾರನಾಗುತ್ತಾನೆ ಮೊದಲು ಒಬ್ಬ ವೇಶ್ಯೆಯನ್ನು ವಿವಾಹವಾಗುವುದೇ ? ಎಂದು ಆಶ್ಚರ್ಯವನ್ನು ಅಸಹ್ಯ ರೀತಿಯಲ್ಲಿ ಅವಳನ್ನು ನೋಡುತ್ತಾನೆ ಅವನ ಮನಸ್ಥಿತಿಯನ್ನು ಬದಲಿಸಿ ಮತ್ತು ಒಳ್ಳೆರೀತಿಯ ಆಲೋಚನೆಯನ್ನು ಬರುವಂತೆ ಮಾಡುವುದು *1

'ಶಬ್ದಗಳು' ಎಂಬ ಕತೆಯಲ್ಲಿ ಪುರುಷನು ಹೆಣ್ಣಿನ ವೇಷವನ್ನು ಧರಿಸುವುದು, ಅದರಿಂದ ಆಗುವಂತಹ ಪರಿಣಾಮವನ್ನು ಇವರ ಕತೆಯಲ್ಲಿ ಕಾಣಬಹುದು ಗಂಡು ಹೆಣ್ಣಿನ ವೇಶವನ್ನು ಹಾಕಿಕೊಂಡು ಪಡುವಂತಹ ಬವಣೆಯನ್ನು ಕತೆಯನ್ನು ಹೇಳಿದ್ದಾರೆ. ಸಮಾಜದ ವಿಭಿನ್ನ ಮುಖದ ಪರಿಚಯವನ್ನು ತಿಳಿಯಬಹುದಾಗಿದೆ. *2

'ಜನ್ಮದಿನ' ಎಂಬ ಕತೆಯಲ್ಲಿ ಕಂಡುಬರುವಂತಹದ್ದು ಬಡತನ, ಹಸಿವು, ನಿರುದ್ಯೋಗವು ಮನುಷ್ಯನನ್ನು ಕಾಡುವಂತಹ ಸಮಸ್ಯೆಗಳನ್ನು ಕುರಿತು ಕತೆಯಲ್ಲಿ ಚರ್ಚಿಸುತ್ತಾರೆ, ಬದುಕಿನ ವಿವಿಧ ಮಜಲುಗಳನ್ನು ಕತೆಯಲ್ಲಿ ವಿವರಿಸಿದ್ದಾರೆ ಜನ್ಮದಿನ ಎನ್ನುವಂತದ್ದು ಬಡವರಿಗೆ ಆಚರಣೆಮಾಡುವುದಕ್ಕೆ ಆಗದೇ ಇರುವಂತಹ ಸ್ಥಿತಿಯನ್ನು ಕಾಣಬಹುದು ಮತ್ತು ಇಂತಹ ಕಲ್ಪನೆಯನ್ನು ಬಡವರು ಕಾಣದಂತೆ ಇರುವಂತಹ ಸ್ಥಿತಿಯನ್ನು ಕಾಣಬಹುದು, ಮತ್ತು ಇಂತಹ ಕಲ್ಪನೆ ಬಡವರ ಪಾಲಿಗೆ ದೂರವೇ ಉಳಿದಿದೆ, ಕೊನೆವರೆಗೂ ಹಸಿವನ್ನು ಸಹಿಸಲಾಗದೆ ಊಟವನ್ನು ಕದಿಯುವಂತಹ

ಪರಿಸ್ತಿತಿಗೆ ಹೋಗುತ್ತಾನೆ, ಇಲ್ಲಿ ಹಸಿವಿನ ತೀವ್ರತೆಯನ್ನು ಕುರಿತು ವೈಕಂ ತುಂಬಾ ಚೆನ್ನಾಗಿ ಚಿತ್ರಿಸುತ್ತಾರೆ. *3

"ಹೀಗೊಬ್ಬ ಮನುಷ್ಯ" ಈ ಕತೆಯಲ್ಲಿ ಕಂಡುಬರುವಂತದ್ದು ಕಳ್ಳನಲ್ಲಿದ್ದ ಹುಸಿ ಒಳ್ಳೆಯ ಗುಣವನ್ನು ಸಹ ಗುರುತಿಸಬಹುದು, ಕಳ್ಳತನ ಮಾಡಿರುವಂತಹ ವ್ಯಕ್ತಿಯು ಮತ್ತೆ ಹಣವನ್ನು ತೆಗೆದುಕೊಂಡು ಬಂದು ಕೊಡುವಂತಹ ಮನಸ್ಸು ಪರಿವರ್ತನೆಯ ಗುಣವನ್ನು ಕಾಣಬಹುದಾಗಿದೆ. . ಆದರೆ ಅದು ಕ್ಷಣಿಕವಾದ ನಮಬಿಕೆ. ಒಂದು ಮಹಾನಗರದ ಜನರು ಕ್ರೂರಿಗಳಾಗಿ ಮನುಷ್ಯನನ್ನು ಅಗೌರವಿಸುವಂತಹ ಹಾಗೂ ಹಿಂಸಿಸುವಂತಹ ರಾಕ್ಷಸ ವರ್ತನೆಯನ್ನು ತೋರುವಂತಹ ಮನಸ್ಥಿತಿಯನ್ನು ಕಾಣಬಹುದಾಗಿದೆ. ಕ್ರೂರತ್ವ/ಮೃಗೀಯ ಸ್ಥಿತಿಯಲ್ಲಿ ಮನುಷ್ಯ ಮನುಷ್ಯನನ್ನು ಕಾಣುವಂತಹ ಸ್ಥಿತಿಂಯು ಈ ಕತೆಯಲ್ಲಿ ನಿರೂಪಿತವಾಗಿದೆ. ಹಾಗೂ ದುಷ್ಟರ ಒಳಗೂ ಮೂಡಬಹುದಾದ ಒಳ್ಳೆಯತನವನ್ನು ಚಿತ್ರಿಸಿದ್ದಾರೆ. *4

"ಬಂಗಾರಿ" ಎಂಬ ಕತೆಯಲ್ಲಿ–ಸಮಾಜದಲ್ಲಿನ ಸ್ಥರಗಳಿಗೆ ಸಂಬಂಧಿಸಿದಂತೆ ವಿಚಾರಗಳು ಬರುತ್ತವೆ, ಮೇಲುವರ್ಗ–ಕೆಳವರ್ಗ ಎನ್ನುವಂತಹ ಪರಿಗಣನೆಯು ಸಮಾಜದಲ್ಲಿ ಒಂದು ಕಂದರವನ್ನು ಉಂಟುಮಾಡುತ್ತದೆ, ಸಮಾಜ ಬಂಗಾರಿಯ ವ್ಯಕ್ತಿತ್ವಕ್ಕೆ ಅವಳ ಪಾತ್ರವು ಈ ಕತೆಯಲ್ಲಿ ಚಿತ್ರೀಕರಣಗೊಳ್ಳುತ್ತದೆ, ಮಾನವೀಯತೆಗೆ ಮಿಡಿಯುವಂತಹ ವ್ಯಕ್ತಿತ್ವವನ್ನು ಇವಳ ಪಾತ್ರದಲ್ಲಿ ಕಾಣಬಹುದಾಗಿದೆ, ಸಮಾಜದಲ್ಲಿನ ಈ ಕಪ್ಪು–ಬಿಳುಪು ಎನ್ನುವಂತಹ ಕಲ್ಪನೆಯು ವ್ಯತಿರಿಕ್ತವಾದಂತಹ ಸ್ಥಿತಿಯನ್ನು ಈಕೆ ತಲುಪುತ್ತಾಳೆ, ಮತ್ತು ಬದುಕಿನ ಏರು ಪೇರುಗಳಿಗೆ ಎದೆಗುಂದದೆ ತನ್ನ ಸ್ವಸಾಮರ್ಥ್ಯದಿಂದ ಬದುಕನ್ನು ಕಟ್ಟಿಕೊಳ್ಳುವಂತಹ ಧೈರ್ಯ ಮನಸ್ಥಿತಿಯನ್ನು ಹೊಂದುವಂತಹದ್ದು, ಗಟ್ಟಿತನವನ್ನು ತೋರಿಸುತ್ತಾಳೆ, ಮನುಷ್ಯನಿಗೆ ಬೇಕಾಗಿರುವಂತಹದ್ದು ಮನುಷ್ಯ ಧರ್ಮೀಯ ಗುಣ ಮೌಲ್ಯವೇ ಹೊರತು ಹೊರಗಿನ ಬಾಹ್ಯ ಸೌಂಧರ್ಯಕ್ಕೆ ಮನ್ನಣೆ ಕೊಡದಂತೆ ಲೇಖಕರು ಅದನ್ನು ತಮ್ಮ ಅನುಭವದ ಹಿತಾಸಕ್ತಿಯಿಂದ ಅದನ್ನು ಪರಿಭಾವಿಸುತ್ತಾರೆ.

"ನೀಲಿ ಕಂದೀಲು" ಎಂಬ ಕತೆಯಲ್ಲಿ ಆತ್ಮ ಮತ್ತು ಜೀವ ಪರವಾದಂತಹ ನಿಲುವನ್ನು ಕಾಣಬಹುದು ನಂಬಿಕೆ ಸಂಪ್ರದಾಯ ದುಷ್ಟ ಶಕ್ತಿಗಳು, ದೆವ್ವ ಎನ್ನುವಂತಹ ಪರಿಕಲ್ಪನೆಯನ್ನು ಈ ಕತೆಯಲ್ಲಿ ನಿರೂಪಕ ರಚಿಸಿ ಜನರಲ್ಲಿ ಇದ್ದಂತಹ ಆತಂಕವನ್ನು ಭಯವನ್ನು ಭೇದಿಸುವಂತಹ ಸಂದೇಶಗಳು ಬರುತ್ತದೆ, ಸಮಾಜದಲ್ಲಿ ದೆವ್ವ, ದುಷ್ಟ ಶಕ್ತಿಗಳು ಎನ್ನುವಂತಹ ಮೂಢನಂಬಿಕೆಗಳಿಗೆ ಆಸ್ಪದ ಕೊಡದೆ, ಜನರ ಮನಸ್ಸಿನ ಭಾವನೆಯನ್ನು ಭೇದಿಸುವಂತಹ ಸ್ಥಿತಿ ಕಾಣಬಹುದು. ದೆವ್ವದ ಜೊತೆಯಲ್ಲಿಯೇ ವಾಸಿಸುವಂತಹ ಅದರೊಂದಿಗೆ ತಾವಿದ್ದ ಮನೆಯನ್ನು ವಿಭಾಗ ಮಾಡಿಕೊಳ್ಳವಂತಹ ಒಂದು ಭಾಗ ಭಾರ್ಗವಿ ಎನ್ನುವಂತಹ ಆತ್ಮಕ್ಕೆ ಕೊಡುವುದು, ಮತ್ತೊಂದು ಭಾಗ ಲೇಖಕರಿಗೆ

ಇರುವಂತೆ ನಿರ್ಧರಿಸುತ್ತಾರೆ, ಬದುಕುವುದಕ್ಕೆ ಆತ್ಮಕ್ಕೂ ಕೂಡ ಹಕ್ಕಿದೆ ಎನ್ನುವಂತದ್ದನ್ನು ತೋರಿಸಿಕೊಡುತ್ತಿದೆ. ಈ ಕತೆಯನ್ನು ಕತೆಗಾರ ಮ್ಯಾಜಿಕ್ ರಿಯಲಿಸಂ ತಂತ್ರದ ಮೂಲಕ ಚಿತ್ರಿಸುತ್ತಾರೆ.*5

"ಲೋಕ ಪ್ರಸಿದ್ಧ ಮೂಗು" ಈ ಕತೆಯು ಮನುಷ್ಯನ ಆಸೆ, ಆಕಾಂಕ್ಷೆ, ಗೌರವ, ಜನಪ್ರಿಯತೆಗೆ ಸಂಬಂಧಿಸಿದಂತೆ ಕತೆಯಲ್ಲಿ ಬರುವಂತಹ ಸನ್ನಿವೇಶಗಳು ಬದುಕಿನ ಸುತ್ತ ಯಾವ ರೀತಿ ಸುತ್ತುತ್ತವೆ ಎನ್ನುವಂತಹ ವಿಚಾರವನ್ನು ಕಾಣಬಹುದು.

ಮನುಷ್ಯನ ದೇಹದ ಅಂಗವಿಕಲತೆಯನ್ನು ವಸ್ತುವನ್ನಾಗಿಸಿಕೊಂಡು, ಅದನ್ನು ಜಗತ್ ಪ್ರಸಿದ್ದಿಯನ್ನಾಗುವಂತೆ ಮಾಡುವಂತಹ ತಿರುವನ್ನು ಕತೆಯಲ್ಲಿ ತಂದಿದ್ದಾರೆ, ಈ ಕತೆಯಲ್ಲಿ ಬರುವಂತಹ ಕಾಮ್ರೆಡ್ ಎಂಬ ವ್ಯಕ್ತಿಗೆ ಮೂಗು ಉದ್ದವಾಗಿರುತ್ತದೆ, ಈ ಉದ್ದವಿರುವುದೇ ಒಂದು ಶಾಪವಾಗಿ ಪರಿಣಮಿಸಿದೆ, ಎಂದು ಭಾವಿಸುವಂತಹ ವ್ಯಕ್ತಿ ಮುಂದೆ ಅದೇ ಸಮಸ್ಯೆಯೇ ಒಂದು ವರದಾನವಾಗಿ ಪರಿಣಮಿಸುವಂತೆ ಕಂಡುಬರುತ್ತದೆ. *7

ಇಂದಿನ ದಿನಗಳಲ್ಲಿ ಅಂಗವಿಕಲತೆಯು ದೊಡ್ಡ ಸಮಸ್ಯೆಯಾಗಿ ಕಾಡುವಂತಹದ್ದು ಆದ್ದರಿಂದ ಸಮಾಜದಲ್ಲಿ ನೆರೆಹೊರೆಯವರೊಂದಿಗೆ ನಿರ್ಲಕ್ಷಕ್ಕೆ ಗುರಿಯಾಗುತ್ತಾರೆ. ಇದರಿಂದ ಜೀವನವೇ ಬೇಸರವಾಗುವ ಮನಸ್ಥಿತಿ ಉಂಟಾಗುವುದು, ಜಿಗುಪ್ಸೆ, ಬೇಸರಗಳು ನಮ್ಮನ್ನು ಕಾಡುವುದಕ್ಕೆ ಪ್ರಾರಂಭವಾಗುತ್ತದೆ, ಅದೇ ಪರಿಸ್ಥಿತಿ ಈ ಕತೆಯಲ್ಲಿ ಬರುವ ಕಾಮ್ರೆಡ್‌ನ ಬದುಕಾಗಿರುತ್ತದೆ.

ವೈಕಂ ರವರ ಕತೆಗಳಲ್ಲಿನ ವೈಶಿಷ್ಟ್ಯವು ಬಡತನ, ಹಸಿವು, ನಿರುದ್ಯೋಗ, ಇತ್ಯಾದಿ ವಸ್ತುವನ್ನೆ ಆಯ್ಕೆ ಮಾಡಿಕೊಂಡು ಸಾಮಾಜಿಕ ಸಮಸ್ಯೆಯನ್ನು ವಿವರಿಸುತ್ತಾ ಹೋಗುತ್ತಾರೆ, ಹಾಗೂ ಸ್ವಲ್ಪ ವಿಭಿನ್ನವಾಗಿ ಆಲೋಚಿಸಿರುವುದು ಎಂದರೆ ಅಂಗವಿಕಲತೆಯೂ ಕೂಡ ಒಂದು ಸಾಮಾಜಿಕ ವ್ಯಕ್ತಿ ಸಮಸ್ಯೆಯನ್ನು ಎದುರಿಸುತ್ತಾನೆ, ಸಾಮಾನ್ಯರ ಹಾಗೆ ಬದುಕು ನಡೆಸುವುದು ಕಷ್ಟವಾಗುತ್ತದೆ, ಹೀಗೆ ವಿಭಿನ್ನ ಆಲೋಚನೆಗಳನ್ನಿಟ್ಟುಕೊಂಡು ಈ ಸಮಸ್ಯೆಯನ್ನು ನಿರೂಪಿಸುವಲ್ಲಿ ಯಶಸ್ವಿಯಾಗಿದ್ದಾರೆ, ಮತ್ತು ಈ ಕತೆಯು ವಿಶೇಷ ತಿರುವನ್ನು ಪಡೆಯುತ್ತದೆ. ಅಲ್ಬರ್ಟ ಕಮೂನೆ ಮೆಟಾಮಾರ್ಫಸಿಸ್ ಕಾದಂಬರಿಯಂತೆ ಪರಿವರ್ತನೆಯನ್ನು ಸಂಕೇತದ ಮೂಲಕ ಚಿತ್ರಿಸುತ್ತಾರೆ.

ಕಾಮ್ರೆಡ್ ಎಂಬ ವ್ಯಕ್ತಿಯು ಮನೆಯ ಕೆಲಸವನ್ನು ಮಾಡಿ ಬಂದ ಅಲ್ಪ ಹಣದಿಂದ ಜೀವಿಸುತ್ತಿದ್ದನು, ನಗರದ ಮೂಲೆಯಲ್ಲಿದ್ದವನು ದಿಢೀರನೆ ರಾಷ್ಟ್ರವ್ಯಾಪ್ತಿ ಇವನ ವಿಷಯ/ಸಮಾಚಾರ ಹರಡುತ್ತದೆ, ಹೀಗೆ ಲೋಕ ಪ್ರಸಿದ್ಧಿಯನ್ನು ಪಡೆಯುತ್ತಾನೆ, ಉದ್ದ ಮೂಗು ಒಬ್ಬ ವ್ಯಕ್ತಿಯ ಜೀವನವನ್ನೇ ಬದಲಾಯಿಸಿ ಬಿಡುವುದನ್ನು ಕತೆಯಲ್ಲಿ ಕಾಣಬಹುದಾಗಿದೆ.

"ವಾರಸುದಾರರು" ಇದರಲ್ಲಿ ಕಂಡುಬರುವಂತಹ ಸಮಾಜದ ಮೇಲೆ ಆಗುವಂತಹ ಪರಿಣಾಮ ಮತ್ತು ಆಧುನಿಕತೆ ವೈಚಾರಿಕ ದೃಷ್ಟಿಕೋನಗಳನ್ನು ಎದುರಿಸಿದಾಗ ಆದಂತಹ ಸಂಪ್ರದಾಯ ಶರಣ ಸಂಸ್ಕೃತಿ ಏನೂ ಮಾಡಲಾಗದೆ ಇರುವಂತಹ ಸ್ಥಿತಿಯನ್ನು ಈ ಕತೆಯಲ್ಲಿ ಮೂಡಿಬಂದಿದೆ.

ಆಧುನಿಕ ಶಿಕ್ಷಣ ಕ್ರಮವು ಒಂದು ವರ್ಗವನ್ನು ಮಾತ್ರ ಭೌದ್ಧಿಕ ಆಲೋಚನೆ ಹಚ್ಚಿದರೆ, ಮತ್ತೊಂದು ಕಡೆ ಶಿಕ್ಷಣವನ್ನಾಗಲಿ ಅಥವಾ ಆಧುನಿಕತೆಯನ್ನಾಗಲಿ ಸ್ವೀಕರಿಸಲು ಸಿದ್ದವಿಲ್ಲದಂತಹ ಮುಗ್ದ ಜನಗಳ ಆಚಾರ, ವಿಚಾರ, ರೂಡಿ, ಸಂಸ್ಕೃತಿಗಳ ಬಗ್ಗೆ ಈ ಕತೆ ಬೆಳಕು ಚೆಲ್ಲುತ್ತದೆ.

ಈ ಕತೆಯಲ್ಲಿನ ಮತ್ತೊಂದು ಅಂಶವೆಂದರೆ ಈ ಸಮಾಜದಲ್ಲಿ ಪ್ರತಿಯೊಬ್ಬನೂ ಮತ್ತೊಬ್ಬರ ಗುಲಾಮನಾಗಿ ಕಂಡುಬರುತ್ತಾನೆ, ಅದು ಅನಿವಾರ್ಯವೂ ಆಗಿಬಿಟ್ಟಿದೆ ಪ್ರಶ್ನಿಸುವ, ವಿರೋಧಿಸುವಂತಹ ಸಾಹಸಕ್ಕೆ ಮುಂದಾಗುವುದು ಒಬ್ಬರ ಮೇಲೆ ಮತ್ತೊಬ್ಬನು ಹಿಡಿತವನ್ನು ಸಾಧಿಸಿರುತ್ತಾನೆ, ಇದು ನಮಗೆ ಅರಿವಿಲ್ಲದಂತೆಯೇ ಈ ಕ್ರಿಯೆಯು ಸಮಾಜದಲ್ಲಿ ಅನೇಕ ವರ್ಷಗಳಿಂದ ನಡೆದುಕೊಂಡು ಬಂದಿದೆ. *8

ಹೀಗೆ ಹತ್ತು –ಹಲವು ವಿಭಿನ್ನ ದೃಷ್ಟಿಕೋನಗಳಿಂದ ವೈಕಂ ಬಷೀರ್‌ರವರು ಸಮಾಜದ ಸಮಸ್ಯೆಗಳ ಆಗು ಹೋಗುಗಳನ್ನು ಕುರಿತಂತೆ ತಮ್ಮ ವಿಚಾರ ಧಾರೆಯನ್ನು ಹಾಗೂ ತಾವು ಕಂಡ ಬದುಕಿನ ವಿವಿಧ ಮುಖದ ಸತ್ಯವನ್ನು ತಮ್ಮ ಕತೆಯಲ್ಲಿ ತಂದಿದ್ದಾರೆ, ಒಂದು ಸಮುದಾಯ/ಸಮಾಜದ ಸರ್ವತೋಮುಖ ಬೆಳವಣಿಗೆಯನ್ನು ಗಮನದಲ್ಲಿಟ್ಟುಕೊಂಡು ಮಾನವನ ಬದುಕಿನ ದುಸ್ಥಿತಿಯನ್ನು ಕುರಿತು ನನ್ನ ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ.

## "ಕೌಟುಂಬಿಕ ಸ್ಥಿತಿಗತಿ ವೈಕಂ ಕತೆಗಳಲ್ಲಿ"

ವೈಕಂ ರವರ ಕತೆಗಳನ್ನು ನನ್ನ ಅಧ್ಯಯನದ ದೃಷ್ಟಿಯಿಂದ ಪರಿಶೀಲಿಸಿದಾಗ ಸಾಮಾನ್ಯವಾಗಿ ಕೌಟುಂಬಿಕ ಸಮಸ್ಯೆಗಳು ಉಂಟಾಗುವುದಕ್ಕೆ ಕಾರಣ ಹಲವಾರು ಆರ್ಥಿಕ ಮುಗ್ಗಟ್ಟು, 1929ರ ಕಾಲದಲ್ಲಿ ಅಮೇರಿಕಾದಲ್ಲಿ ನಡೆದ ಆರ್ಥಿಕ ಮುಗ್ಗಟ್ಟು ಬರಗಾಲದ ಅಥವಾ ಸ್ವತಂತ್ರ ಸಂಗ್ರಾಮದ ಭೀಕರತೆಯನ್ನು ತೀವ್ರತೆಯನ್ನು ಮನಗಾಣಬಹುದು

ಒಂದು ಸಮುದಾಯದ ಜನರ ಸ್ಥಿತಿ–ಗತಿಗೆ ಸಂಬಂಧಿಸಿದಂತೆ ಅನೇಕ ದೃಷ್ಟಿಕೋನಗಳು ಕಂಡುಬರುತ್ತವೆ,

"ಪ್ರೇಮ ಪತ್ರ" ಈ ಕತೆಯಲ್ಲಿ ಪ್ರಮುಖ ವಿಚಾರ ಕಂಡುಬರುವಂತದನ್ನು ಸರೂಮಾಳ ಮನೆಯಲ್ಲಿನ ಆರ್ಥಿಕ ಪರಿಸ್ಥಿತಿ ಹದಗೆಟ್ಟಿರುವುದು, ಹಾಗೂ ವಿವಾಹಕ್ಕೆ ಇವಳ ತಂದೆ ವರದಕ್ಷಿಣೆ

ಕೊಡಬೇಕಿತ್ತು, ಇವರ ಕುಟುಂಬದಲ್ಲಿ ಅಷ್ಟು ಸೌಲಭ್ಯವಿಲ್ಲರಲಿಲ್ಲ., ಈ ವಿಚಾರ ಅನೇಕ ತಿರುವುಗಳನ್ನು ಎದುರಿಸುವಂತಾಯಿತು, ಕೆಲಸದ ಅಗತ್ಯ–ಸಂಬಳದ ಅವಶ್ಯಕತೆ ಎಂದು ತೀವ್ರವಾಗುವಂತಾಯಿತು.

ಮತ್ತೊಂದು ಸಂಗತಿ ಎಂದರೆ ಸರುಮಾಳು ತನ್ನ ತಾಯಿಯನ್ನು ಕಳೆದುಕೊಂಡು ಮಲತಾಯಿಯ ಬಳಿ ಬದುಕನ್ನು ಸಾಗಿಸುತ್ತಿದ್ದದ್ದು ಕಷ್ಟವಾಯಿತು, ಇಬ್ಬರೂ ದಿನಾ ಜಗಳವಾಡುವಂತಹ ಸ್ಥಿತಿ ತಲುಪಿದರು. ಮತ್ತು ಕೋಪಿಷ್ಟೆಯೂ ಆಗಿದ್ದಳು, ಮನಸ್ಸಿಗೆ ನೆಮ್ಮದಿ ಇಲ್ಲದಂತಾಯಿತು ಈ ರೀತಿಯಾಗಿ ಕೌಟುಂಬಿಕ ವಿಚಾರದಲ್ಲಿ ಅನೇಕ ತೊಂದರೆ, ತೊಡಕುಗಳನ್ನು ಹೊಂದಿದ್ದಂತಹ ಕುಟುಂಬವಾಗಿ ಕಂಡುಬರುತ್ತದೆ, ಕತೆಯ ರಚನೆಗೆ ಕೌಟುಂಬಿಕ ಪರಿಸರವು ಬಹಳ ಮುಖ್ಯವಾಗುತ್ತದೆ.

ಮನುಷ್ಯನ ಬದುಕಿಗೆ ಕುಟುಂಬದ ಪಾತ್ರವು ಬಹಳ ಮುಖ್ಯವಾದಂತದ್ದು, ಅದರಲ್ಲಿ ವಿಘಟನೆಗಳು, ಜಗಳ, ಬಿರುಕುಗಳು ಉಂಟಾಗುವುದನ್ನು ಕುರಿತು ವೈಕಂ ರವರು ತಮ್ಮ ಕತೆಗಳಲ್ಲಿ ಸವಿಸ್ತಾರವಾಗಿ ವಿವರಿಸಿದ್ದಾರೆ. *9

'ಹೂಬಾಳೆ', 'ಬಂಗಾರಿ', 'ಐಷುಕುಟ್ಟಿ'– ಈ ಕತೆಯು ಮುಸ್ಲೀಮ್ ಸಮುದಾಯದ ಕೌಟುಂಬಿಕ ಚಿತ್ರಣವನ್ನು ನೀಡುತ್ತದೆ, ಈ ಎರಡೂ ಕತೆಯಲ್ಲಿ ಮಾತೃಪ್ರದಾನ ಕುಟುಂಬ ವ್ಯವಸ್ಥೆ ಇರುವಂತದ್ದು, ಕಂಡುಬರುತ್ತದೆ, ಕೌಟುಂಬಿಕ ವಲಯದಲ್ಲಿ ಹೆಣ್ಣಿಗೆ ಪ್ರಾಧ್ಯಾನ್ಯತೆ ಕೊಡುವುದು ಕಂಡುಬರುತ್ತದೆ ಹಾಗಾಗಿ ಅವಳು ತನ್ನ ಸ್ಥಾನವನ್ನು ಉಳಿಸಿಕೊಳ್ಳಬೇಕೆಂದರೆ ಪ್ರತಿ ಕ್ಷಣವೂ ಹೋರಾಟದ ಹಾದಿಯನ್ನು ಅನುಸರಿಸಬೇಕಿತ್ತು.

"ಹೂಬಾಳೆ" ಎಂಬ ಕತೆಯಲ್ಲಿ ಹೆಣ್ಣು ಮನೆ ನಿರ್ವಹಣೆ ಕೌಶಲ್ಯದ ಬಗ್ಗೆ ಹಾಗೂ ಜವಾಬ್ದಾರಿಯನ್ನು ಈ ಕತಾಭಾಗದಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾರೆ, ಹೆಣ್ಣು ಮನೆಯ ಕಣ್ಣು ಕುಟುಂಬದ ಆಗುಹೋಗುಗಳನ್ನು ನೋಡಿಕೊಳ್ಳುತ್ತಾಳೆ, ಈ ಕತೆಯಲ್ಲಿ ಜಮೀಲಾಳು ತಾನು ಓದಿದವಳು ಹಾಗೂ ಶ್ರೀಮಂತ ಮನೆತನ ಎನ್ನುವಂತಹ ಜಂಬ ಸೊಕ್ಕಿನಿಂದ ಮೆರೆಯುತ್ತಿದ್ದಳು, ಅದೇ ವರ್ತನೆಯನ್ನು ವಿವಾಹವಾದ ನಂತರದಲ್ಲಿಯೂ ಮುಂದುವರೆಸಿದ್ದಕ್ಕೆ ಗಂಡ–ಹೆಂಡತಿಯಲ್ಲಿ ಹೊಂದಾಣಿಕೆಯ ಬಿರುಕು ಉಂಟಾಯಿತು ಒಬ್ಬರ ಕಷ್ಟವನ್ನು ಮತ್ತೊಬ್ಬರು ಅರ್ಥಮಾಡಿಕೊಳ್ಳದೆ ಬರೀ ಚರ್ಚೆ, ಜಗಳ, ಮುನಿಸುಗಳನ್ನು ಕಾಣಬಹುದು ಕೊನೆಗೆ ಇದೇ ರೀತಿ ಮನಸ್ಸುಗಳಲ್ಲಿ ಬಿರುಕು, ಒಡಕುಗಳು ಮೂಡುವುದನ್ನು ನನ್ನ ಅಧ್ಯಯನದಿಂದ ಪರಿಶೀಲಿಸಿದ್ದೇನೆ. *10

"ಐಷುಕುಟ್ಟಿ" ಈ ಕತೆಯಲ್ಲಿಯೂ ಸಹ ಕೌಟುಂಬಿಕ ಸಂಘರ್ಷವನ್ನು ಕಾಣಬಹುದು ಅತ್ತೆ ಸೊಸೆ ಜಗಳ ಮನೆ ಮರ್ಯಾದೆಯನ್ನು ಹಾಳು ಮಾಡಿದಳು ಎನ್ನುವಂತೆ ಅತ್ತೆ ಸೊಸೆಯನ್ನು ದೂಷಣೆ ಮಾಡುತ್ತಾಳೆ, ಮೈದುನನ ಹೆಂಡತಿ ಅಸ್ಮಾಬ್ಬಮ್ಮ ಹೆತ್ತಾಗ ಡಾಕ್ಟರನ್ನು ಹೇಗೆ ಕರೆತಂದರು?

ಹಾಗೆಯೇ ಏನನ್ನಾದರೂ ಮಾರಿ ಹಣ ತರಲಿ ಎನ್ನುವಂತ ದೋರಣೆ ಐಷುಕುಟ್ಟಿಯ ವಿಚಾರವಾಗಿರುತ್ತದೆ.

ಕುಟುಂಬದಲ್ಲಿ ಬರುವಂತಹ ಅಂತಸ್ತುಗಳ ಬಗ್ಗೆಯೂ ಕೂಡ ಜಗಳವಾಡುತ್ತಾರೆ ಅಸ್ಯಾಮ್ಮನ ಅಂತಸ್ತು ತನಗಿಂತಲೂ ಕೀಳು-ತಾನು ಶ್ರೇಷ್ಠಳು ಎಂಬಂತಹ ಮನಸ್ಥಿತಿಯನ್ನು ಐಷುಕುಟ್ಟಿ ಹೊಂದಿರುತ್ತಾಳೆ. *11

ಈ ಕತೆಯಲ್ಲಿ ಹೆಣ್ಣು ಎಲ್ಲೂ ಕೂಡ ಪ್ರತಿಷ್ಠೆಯನ್ನು ಕಳೆದುಕೊಳ್ಳದೆ ಆತ್ಮಸ್ಥೈರ್ಯವನ್ನು ಉಳಿಸಿಕೊಳ್ಳುವುದಕ್ಕೆ ಮಾಡುವಂತಹ ಪ್ರಯತ್ನಗಳು ಈ ಕತೆಯಲ್ಲಿ ಕೌಟುಂಬಿಕ ಚೌಕಟ್ಟಿನ ಹಿನ್ನೆಲೆಯಲ್ಲಿ ಕತೆಯನ್ನು ಹೆಣೆದಿದ್ದಾರೆ.

ಆಸ್ಪತ್ರೆಯಲ್ಲಿ ಹೆರಿಗೆಯಾದರೆ ಮಾತ್ರವೇ ತಮ್ಮ ಕುಟುಂಬದ ಪ್ರತಿಷ್ಠೆ, ಗೌರವ ಎಂಬಂತಹ ದೋರಣಾ ಮನೋಭಾವ ಇರುವಂತದ್ದು ಈ ಕತೆಯಲ್ಲಿ ಕಾಣುತ್ತದೆ, ಅಲ್ಲಿನ ಸಮುದಾಯವೇ ಆ ರೀತಿಯ ವಾತಾವರಣವನ್ನು ಉಂಟುಮಾಡಿದೆ, ಮತ್ತೊಬ್ಬರ ಸಂಬಂಧಿಯನ್ನು ನೋಡಿ ಅಸೂಹೆ ಪಡುವಂತಹ ಮನಸ್ಥಿತಿಯನ್ನು ಹೊಂದಿದವರಾಗಿರುತ್ತಾರೆ, ಇಂತಹ ಸಣ್ಣ ಸೂಕ್ಷ್ಮ ವಿಚಾರಗಳ ಕಡೆಯೂ ಗಮನಿಸುತ್ತಿರುವುದು ಕಂಡುಬರುತ್ತದೆ, ವೈಕಂ ಬಷೇರ್‌ರವರು ತಮ್ಮ ಕತೆಗಳಲ್ಲಿ ಜೀವನ ಪ್ರತಿ ಹಂತ, ಘಟನೆಯನ್ನು ಸೂಕ್ಷ್ಮ ಎಳೆಗಳನ್ನಾಗಿ ಆಯ್ಕೆ ಮಾಡಿಕೊಂಡು ತಮ್ಮ ಬರವಣಿಗೆಯಲ್ಲಿ ಒಡಮೂಡಿಸಿದ್ದಾರೆ, ಕುಟುಂಬದ ಆರ್ಥಿಕ ಸ್ಥಿತಿ ಚೆನ್ನಾಗಿದ್ದರೆ ಮಾತ್ರ ಯಾವುದೇ ತೊಂದರೆ ಬಂದರೂ ನಿಭಾಯಿಸಬಹುದು, ಆದರೆ ಹಣಕಾಸಿಗೆ ತೊಂದರೆ ಇದ್ದರೆ ಕುಟುಂಬದಲ್ಲಿ ಬಿರುಕುಗಳು ಉಂಟಾಗುತ್ತದೆ, ಅದೇ ರೀತಿ ಐಷುಕುಟ್ಟಿಯ ಪಾತ್ರದಲ್ಲಿಯೂ ಇಂತಹ ಪರಿಸ್ಥಿತಿಯನ್ನು ಕಾಣಬರುತ್ತದೆ, ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಲ್ಲ ಎಂದು ಗಂಡನಿಗೆ ತಲಾಕ್ ಕೊಡುವುದಾಗಿ ಮಾತಾಡಿದರು. ಐಷುಕುಟ್ಟಿ ಗಂಡ ಬಡವನಾಗಿದ್ದನು ಹಣದ ಕೊರತೆ ಇದ್ದದ್ದರಿಂದ ಗಂಡ-ಹೆಂಡತಿ-ಅತ್ತೆ ಜಗಳವಾಡುವಂತಹ ಮತ್ತು ಸಂಬಂಧವನ್ನೇ ಕಡಿದುಹಾಕಿಕೊಳ್ಳುವಂತಹ ಮಾತುಗಳನ್ನು ಆಡುತ್ತಾರೆ, ಇಂತಹ ಪರಿಸ್ಥಿತಿಗಳು ಇಂದಿನ ಕಾಲಕ್ಕೂ ಪ್ರಸ್ತುತವಾಗಿದೆ, ಎನ್ನುವ ವಿಚಾರ ಕಂಡುಬರುತ್ತದೆ. ಅವಿಭಕ್ತ ಕುಟುಂಬಗಳೆಲ್ಲವೂ ಇಂದು ವಿಭಕ್ತ ಕುಟುಂಬಗಳಾಗಿ ಕಂಡುಬಂದಿವೆ. ಏಕೆಂದರೆ ಹೊಂದಾಣಿಕೆಯ ಸಮಸ್ಯೆ, ಸಂಬಂಧಗಳ ಭಾಂದವ್ಯಕ್ಕೆ ದಕ್ಕೆ ಉಂಟಾಗುವಂತದ್ದು ಸರ್ವೇಸಾಮಾನ್ಯವಾಗಿ ಕಂಡು ಬರುತ್ತದೆ, ಅಂತಹ ಸಂಗತಿಗಳನ್ನು ತಮ್ಮ ಕತೆಯಲ್ಲಿ ನಿರೂಪಿಸಿದ್ದಾರೆ ಎಲ್ಲಾ ವಿಧದ ಬದುಕಿನ ವಿಭಿನ್ನ ಮುಖಗಳನ್ನು ವಿವರಿಸುತ್ತಾ ಹೋಗುತ್ತಾರೆ.

"ಬಂಗಾರಿ" ಈ ಕತೆಯು ಎಲ್ಲ ಕತೆಗಳಿಗಿಂತ ತುಂಬ ವಿಭಿನ್ನವಾಗಿ ಕಂಡುಬರುತ್ತದೆ, ಈ ಕತೆಯಲ್ಲಿ ಬರುವಂತಹ ಕೆಲವು ಘಟನೆ, ಸಂಧರ್ಭ, ಪರಿಸ್ಥಿತಿಗಳಿಂದ ಕೌಟುಂಬಿಕ ಬದುಕಿನ ಚಿತ್ರಣವನ್ನು ಈ ಕತೆ ಸ್ಪಷ್ಟಪಡಿಸುತ್ತದೆ.

ದಲಿತ ವರ್ಗಕ್ಕೆ ಸೇರಿದಂತಹ ಕೌಟುಂಬಿಕ ಬದುಕು ಯಾವ ರೀತಿ ಇರುತ್ತದೆ, ಎನ್ನುವಂತಹ ವಿಚಾರಗಳಿಗೆ ಸಂಬಂಧಿಸಿದಂತೆ ಈ ಕತೆಯು ಸಂವಾದಿಸುತ್ತದೆ, ದಲಿತ ಹೆಣ್ಣು ತಾನೊಬ್ಬಳೇ ಒಂದು ಮನೆಯ ಜವಾಬ್ದಾರಿಯನ್ನು ನಿಭಾಯಿಸುವಂತಹ ಹೊಣೆ ಅವಳ ಮೇಲಿರುತ್ತದೆ, ಆದರೂ ಸಹ ಅವಳು ಕೆಲಸ ಮಾಡಿ ಅಂದಿನ ಊಟವನ್ನು/ಆಹಾರವನ್ನು ಸೇವಿಸುವಂತಹ ಸ್ಥಿತಿ ಕೆಲಸಕ್ಕೆ ಹೋದರೆ ಉಂಟು ಇಲ್ಲದಿದ್ದರೆ ಉಪವಾಸ ಇವಳಿಗೆ ಈ ರೀತಿಯಾಗಿ ಆರ್ಥಿಕವಾಗಿ ಬಹಳ ಹಿಂದುಳಿದಿದ್ದಂತಹ ಕುಟುಂಬವಾಗಿತ್ತು, ತಾಯಿ ಅನಾರೋಗ್ಯದಿಂದ ಮೃತಪಟ್ಟಿದ್ದರು ಚಿಕಿತ್ಸೆಗೂ ಹಣವಿಲ್ಲದ ಪರಿಸ್ಥಿತಿಯನ್ನು ಎದುರಿಸಬೇಕಾಗಿತ್ತು, ಬಂಗಾರಿಯು ಜೀವನದಲ್ಲಿ ಒಂಟಿಯಾಗಿದ್ದರೂ ಸಹ ತನ್ನ ಕೌಟುಂಬಿಕ ಚೌಕಟ್ಟಿನಲ್ಲಿ ಉಳಿಯಲು ಒಬ್ಬ ಬಡವ, ಅನಾಥನಿಗೆ ಆಶ್ರಯವನ್ನು ನೀಡುವುದರೊಂದಿಗೆ ಒಬ್ಬ ಉತ್ತಮ ವ್ಯಕ್ತಿತ್ವ ಇರುವಂತಹ ಹೆಣ್ಣಾಗಿ ಈ ಕತೆಯಲ್ಲಿ ಕಂಡುಬಂದಿದ್ದಾಳೆ. ಹೀಗೆ ದೀನ-ದಲಿತರ ಕೌಟುಂಬಿಕ ಸಂಗತಿಗಳನ್ನು ಸಹ ವೈಕಂರವರು ತಮ್ಮ ಕತೆಯಲ್ಲಿ ಬರೆದಿರುವುದನ್ನು ಕಾಣಬಹುದಾಗಿದೆ. *12

"ಹೀಗೊಬ್ಬ ಮನುಷ್ಯ" ಒಬ್ಬ ಶಿಕ್ಷಕ ಜೀವನದ ಆರ್ಥಿಕತೆಯನ್ನು ನೀಗಿಸಲು ಅವನು ಊರಿಂದ ಊರಿಗೆ ಹೋಗಿ ಅಲ್ಲಿ ಇಂಗ್ಲೀಷ್‌ನಲ್ಲಿ ಅವರ ಹೆಸರು ವಿಳಾಸವನ್ನು ಬರೆಯುವಂತಹ ಶಿಕ್ಷಣವನ್ನು ಕಲಿಸುವ ಶಿಕ್ಷಕನಾಗಿದ್ದನು. ಶಿಕ್ಷಕನಿಗಿರುತ್ತದೆ, ಇವನು ಕುಟುಂಬ ನಿರ್ವಹಣೆಗೆ ಪಟ್ಟಂತಹ ಪಾಡು ಮತ್ತು ಅವಮಾನವನ್ನು ಎದುರಿಸಬೇಕಾಗಿ ಬಂತು ಹಣ ಎನ್ನುವಂತದ್ದು ಎಲ್ಲಾ ಕಾಲದಲ್ಲೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದು, ಕೌಟುಂಬಿಕ ನೆಲೆಯಲ್ಲಿ ಕಂಡುಬರುವುದನ್ನು ವೈಕಂರವರು ತಮ್ಮ ಕತೆಗಳಲ್ಲಿ ಹಿಡಿದಿಟ್ಟಿದ್ದಾರೆ, ತನ್ನ ಹಣವನ್ನು ತನಗೆ ನೀಡುವುದರ ಮೂಲಕ ಪರೋಪಕಾರವನ್ನು ಮಾಡುತ್ತಿದೇನೆ ಎಂಬ ಅಹಂನ್ನು ಕಾಣಬಹುದು. *13

"ನೀಲಿ ಕಂದೀಲು" ಮತ್ತು "ವಾರಸುದಾರರು" ಎಂಬ ಕತೆಯಲ್ಲಿ ಆತ್ಮ ಮತ್ತು ಜೀವ ಪರವಾದಂತಹ ವಿಷಯಗಳಿಗೆ ಸಂಬಂಧಿಸಿದಂತೆ ಕತೆಗಳ ವಸ್ತು ಕಂಡುಬರುತ್ತದೆ ಸತ್ತಿರುವಂತಹ ಆತ್ಮವು ಮತ್ತು ಜೀವ ಇರುವಂತಹ ವ್ಯಕ್ತಿಯು ಬದುಕುವುದನ್ನು ಈ ಕತೆಯಲ್ಲಿ ತಿಳಿಸಿಕೊಡುತ್ತಾರೆ, ಇಲ್ಲಿ ಬರುವಂತಹ ಬ್ಯಾಂಕ್ ಉದ್ಯಮಿ ಅವನು ತನಗೆ ಇಷ್ಟವಾಗುವಂತಹ ಮನೆಗಳನ್ನು ಹುಡುಕುವುದು, ಬದಲಾವಣೆ ಮಾಡುವಂತದ್ದನ್ನು ಕಾಣಬಹುದು ಇಂತಹ ಹುಚ್ಚಿರುವಂತಹ ವ್ಯಕ್ತಿಯ

ಕೌಟುಂಬಿಕ ಜೀವನವನ್ನು ಈ ಕತೆಯು ಚಿತ್ರಿಸುತ್ತದೆ, ಇವತ್ತಿನ ಜೀವನದಲ್ಲಿ ತನಗೆ ಒಪ್ಪಿಗೆಯಾಗುವಂತಹ ಮನೆ ಸುತ್ತಮುತ್ತಲ ವಾತಾವರಣ ಇವೆಲ್ಲವನ್ನು ಪಡೆಯುವುದು ಒಂದು ಕಷ್ಟದ ಸೌಲಭ್ಯವನ್ನು ಮಾಡಿಕೊಂಡು ಒಂದು  ಕಡೆ ನೆಲೆನಿಂತು ಕೌಟುಂಬಿಕ ಜೀವನ ನಡೆಸುವಂತಹದ್ದು ಒಂದು ಸಾಹಸವೇ ಹೌದು ಆತ್ಮ ಮತ್ತು ಜೀವಂತ ವ್ಯಕ್ತಿಗಳನ್ನು ಒಂದೇ ಕೌಟುಂಬಿಕ ಚೌಕಟ್ಟಿನಲ್ಲಿ ತರುವಂತಹ ಮಹಾನ್ ಕಲೆಗಾರನಾಗಿ ಬಷೀರ್‌ರವರ ಕತೆಗಳು ಕಂಡುಬರುತ್ತವೆ.

ಅದೇ ರೀತಿ ಆತ್ಮಗಳನ್ನು ತಮ್ಮ ಪೂರ್ವಜರು ಎಂದು ನಂಬಿ ಬದುಕುವಂತಹ ಸ್ಥಿತಿಯನ್ನು "ವಾರಸುದಾರರು" ಎಂಬ ಕತಾ ಭಾಗದಲ್ಲಿ ಕಾಣಬಹುದಾಗಿದೆ, ಕೌಟುಂಬಿಕ ಚೌಕಟ್ಟಿನ ಪರಿಧಿಯಲ್ಲಿರುವಂತಹ ಸಾಂಪ್ರದಾಯಿಕ ನಂಬಿಕೆ ಮೌಲ್ಯವನ್ನು ಅಪಮೌಲ್ಯಗೊಳಿಸಲು ಹೋದಂತಹ ಲೇಖಕನ ಕುಟುಂಬದವರಿಗಾದ ಅವಮಾನವನ್ನು ಕುರಿತಂತೆ ಮಾಹಿತಿ ಈ ಕತೆಯಲ್ಲಿ ಕಂಡುಬರುತ್ತದೆ, ಭಾವಲಿಗಳನ್ನು ತಮ್ಮ ಪೂರ್ವಜರ ಆತ್ಮಗಳು ಅವುಗಳನ್ನು ಇನ್ನೂ ಕೂಡ ಜೀವ ಸ್ಥಿತಿಯಲ್ಲಿ ನಂಬುವಂತಹ ಮುಗ್ದ ಮನಸ್ಸುಗಳನ್ನು ಕಾಣಬಹುದಾಗಿದೆ, ಈ ರೀತಿಯಾಗಿ ಅವರನ್ನು ತಮ್ಮ ಕುಟುಂಬದ ಸದಸ್ಯರನ್ನಾಗಿ ಮತ್ತು ಪೂಜ್ಯನೀಯ ಭಾವದಂತೆ ನಂಬಿರುವಂತಹ ಸ್ಥಿತಿ ಲೇಖಕರಿಗೆ ತಿಳಿಯುತ್ತದೆ ಒಂದು ಕಡೆ ಆಧುನಿಕತೆ, ನಾಗರೀಕವಾಗಿರುವಂತವರು, ನವೀನ ವೈಜ್ಞಾನಿಕ ವಿಧಾನದಲ್ಲಿ ಹೀಗೆ ಎಲ್ಲ ವಿಧಾನದಲ್ಲಿಯೂ ಮುಂದಿರುವಂತಹ ಸಮೂಹ ಒಂದು ಕಡೆಯಾದರೆ ಮತ್ತೊಂದು ಕಡೆಯಲ್ಲಿ ಮೂಡನಂಬಿಕೆ, ಸಾಂಪ್ರದಾಯಿಕ ಮೌಲ್ಯಗಳ ನಂಬಿಕೆ ಇಂತಹ ಸಮಾಜದ ವೈಜ್ಞಾನವನ್ನು ಇವರ ಎರಡೂ ಕತೆಗಳು ಪ್ರತಿಬಿಂಬಿಸುತ್ತವೆ. *14

"ಜೀವನದ ಕರಿನೆರಳು" ಈ ಕತೆಯಲ್ಲಿನ ಕೌಟುಂಬಿಕ ಚಿತ್ರಣವೆಂದರೆ ಮಹಮ್ಮದ್ ಅಬ್ಬಾಸ್‌ನು ಒಬ್ಬ ಮರ್ಯಾದಸ್ಥ ಮನೆತನದವನಾಗಿರುತ್ತಾನೆ, ಇವನು ತನ್ನ ವಿಧ್ಯಾಭ್ಯಾಸವನ್ನು ಮುಗಿಸಿ ಉದ್ಯೋಗವನ್ನು ಪಡೆಯಲು ಪಟ್ಟಣಕ್ಕೆ ಬರುತ್ತಾನೆ, ಇಲ್ಲಿ ಆದಂತಹ ಅನೇಕ ಬದಲಾವಣೆಗಳು ಪಡೆದಂತಹ ಅನುಭವ ಹಾಗೂ ಕೊನೆಯಲ್ಲಿ ತನ್ನ ಮನೆತನದ ಗೌರವವು ಹಾಳಾದ ಸಂಗತಿಯಿಂದ ಮರುಗುವಂತಹ ವಿಚಾರಗಳು ಈ ಕತೆಯಲ್ಲಿ ಕಂಡುಬರುತ್ತದೆ.

ಅಬ್ಬಾಸ್‌ನ ಬಳಿ ಇದ್ದ ಹಣದ ಗಂಟು ಕರಗಿದಂತೆ ದಿನೇ ದಿನೇ ಕಷ್ಟವನ್ನು ಎದುರಿಸಬೇಕಾದಂತಹ ಸ್ಥಿತಿ ಉಂಟಾಯಿತು. ಯಾವುದೋ ಕೊಳಗೇರಿ ಪ್ರದೇಶದಲ್ಲಿ ಬಾಡಿಗೆ ಮನೆ ಮಾಡಬೇಕಾದಂತಹ ಸ್ಥಿತಿ, ಅಲ್ಲಿ ಅವನ ಮನೆಯ ಸುತ್ತಮುತ್ತಲಿದ್ದ ಪರಿಸರ ಜನಜೀವನ ಹಾಗೂ ಅವನ ಮನೆಯ ಆರ್ಥಿಕ ಸ್ಥಿತಿ ಸರಿಯಿರಲಿಲ್ಲ. ಮನೆಯ ಸುತ್ತಮುತ್ತ ವೇಶ್ಯೆಯರು ವಾಸವಿದ್ದಂತಹ ಸ್ಥಳದಲ್ಲಿ ಮಡಿವಂತ ಮರ್ಯಾದಸ್ಥರು ಇರುವಂತಹ ಸ್ಥಳವಲ್ಲ ಎಂಬ ಕೊರಗನ್ನು ಅನುಭವಿಸುತ್ತಿದ್ದ

ಒಬ್ಬ ವೇಶ್ಯೆ ಇವನನ್ನು ಪ್ರೀತಿಸುವಂತದ್ದು ಇದ್ಯಾವುದೂ ಅವನಿಗೆ ಸಹಿಸಲಾಗಲಿಲ್ಲ ಮತ್ತು ಇವನು ಬೇರೆ ಸ್ಥಳಕ್ಕೆ ಹೋಗುವಂತಹ ಶಕ್ತಿ ಹಣದ ನೆರವೂ ಇವನಿಗಿರಲಿಲ್ಲ ಮನೆಯ ಬಾಡಿಗೆ ಕಟ್ಟುವುದಕ್ಕೂ ಹಣವಿಲ್ಲದೆ ಮಾಲೀಕ ಇವನ ಮೇಲೆ ದಿನಾ ಜಗಳ ಮಾಡುತ್ತಿದ್ದ, ಈ ಎಲ್ಲಾ ಅಂಶಗಳಿಂದ ತನ್ನ ವಂಶದ ಗೌರವವನ್ನು ನಾನು ಹಾಳು ಮಾಡುತ್ತಿದ್ದೇನೆ ಎಂಬಂತಹ ಸ್ಥಿತಿಗೆ ತಲುಪಿ ಮರುಗುತ್ತಾನೆ. *15

"ಯುದ್ಧ ಮುಗಿಯುವುದಾದರೆ" ಈ ಕತೆಯಲ್ಲಿ ಯುದ್ಧ, ಹಿಂಸೆ, ಅಶಾಂತಿಗಳನ್ನು ತಿಳಿಯುವಂತಹ ಕತೆಯಾಗಿ ಕಂಡುಬರುತ್ತವೆ. ರಾಷ್ಟ್ರೀಯತೆಯ ಪ್ರಜ್ಞೆಯನ್ನು ಹೊಂದಿರುವಂತಹ ಕತೆಯಾಗಿ ಕಂಡುಬರುತ್ತದೆ. ನವೋದಯ ಕಾಲದ ಲೇಖಕರ ಬರವಣಿಗೆಯಲ್ಲಿ ಕಂಡುಬರುವಂತಹ ಲಕ್ಷಣವಾಗಿದೆ.

ಈ ಕತೆಯಲ್ಲಿ ಒಬ್ಬ ಪ್ರಸಿದ್ಧ ಲೇಖಕನ ಬಳಿ ಪತ್ರಕರ್ತರು ಸರ್ ಯುದ್ಧ ಮುಗಿಯುವುದಾದರೆ....? ಎಂದು ಅವರ ಉಪದೇಶ ನುಡಿ ಮುತ್ತುಗಳಿಗಾಗಿ ಕಾತರದಿಂದ ಕಾಯುತ್ತಿರುತ್ತಾರೆ. ಆ ಪ್ರಸಿದ್ಧ ವ್ಯಕ್ತಿಯ ಉಪದೇಶ ಈ ರೀತಿ ಇದೆ. *16

"ಇಂದಿನ ಈ ಪ್ರಪಂಚದ ಸಕಲ ರಾಜಕೀಯ ನಾಯಕರುಗಳು ಎಲ್ಲಾ ಧರ್ಮ ಗುರುಗಳೂ, ಬುದ್ಧಿಜೀವಿಗಳೂ, ಸೈನ್ಯದ ಎಲ್ಲಾ ಮುಖ್ಯಸ್ಥರುಗಳೂ.... ಈ ನೆಲದ ಒಡಲಲ್ಲಿ ಬದುಕಿರುವ ಎಲ್ಲಾ ಗಂಡು – ಹೆಣ್ಣುಗಳು ನನ್ನಂತೆ ಕಜ್ಜಿಯಂತೆ ನರಳಬೇಕು. ಹಗಲು ಇರಳೆನ್ನದೆ ನವೆ ಹುಟ್ಟಿಸಿ ಕಾಡುವ ಕಜ್ಜಿ ಖಂಡಿತ ಅವರುಗಳಿಗೆಲ್ಲಾ ಬರಬೇಕು.

ಇಂತಹ ಹೇಳಿಕೆಯನ್ನು ಒಬ್ಬ ವಿಮರ್ಶಕ ಕೊಟ್ಟಿದ್ದಾನೆ ಎಂದರೆ, ಅವನು ಈ ಸಮಾಜಕ್ಕೆ ಅಂಟಿಕೊಂಡಿರುವ ದಾರಿದ್ರವನ್ನು ಅಂದರೆ,( ಧರ್ಮ, ರಾಜಕೀಯ, ಜಾತಿ, ಬಡತನ, ಹಸಿವು,) ಅನಕ್ಷರತೆ ಇತ್ಯಾದಿ .ನಾಶಮಾಡಲು ಆಗದೆ ನೊವಿನ ಧ್ವನಿಯಾಗಿ ಕಂಡುಬರುತ್ತದೆ.
ಇವುಗಳಿಂದ ಈ ಸಮಾಜವು ಮುಕ್ತವಾಗದೆ ಅದೇ ದರಿದ್ರಸ್ಥಿತಿ ಉಳಿದಿರುವುದನ್ನು ನೋಡಿ ಇಂತಹ ವ್ಯಾಖ್ಯಾನವನ್ನು ಮಾಡಿದ್ದಾರೆ.

ಧಾರ್ಮಿಕವಾಗಿ ಘರ್ಷಣೆಗಳು, ಕುತಂತ್ರ ರಾಜಕೀಯ, ಮೋಸ, ವಂಚನೆ, ಯುದ್ಧ, ಅಶಾಂತಿ, ಸಾವು ನೋವುಗಳು ಇವುಗಳೆನ್ನೆಲ್ಲಾ ಸಹಿಸಲಾರದೆ ಇಂತಹ ವ್ಯಾಖ್ಯಾನ/ ಉಪದೇಶವನ್ನು ನೀಡಿರುವುದು ಕಂಡುಬರುತ್ತದೆ. ಇವರುಗಳಿಗೆ ತಮ್ಮ ಬಗ್ಗೆ ತಾವು ಯೋಚಿಸುವುದಕ್ಕೂ ಸಮಯವಿರಬಾರದು. ಸಮಯವಿದ್ದರೆ, ಇವರ ಆಲೋಚನೆಗಳಿಂದ ಸಮಾಜಕ್ಕೆ ಅಂಟಿರುವಂತಹ ಸಾಮಾಜಿಕ ಪಿಡುಗುಗಳು ಮೂಡನಂಬಿಕೆ, ಧರ್ಮ, ಜಾತಿ, ಇತ್ಯಾದಿಗಳಿಗೆ ಸಂಬಂಧಿಸಿದಂತೆ ಇವು ಯಾವಾಗಲೂ ಸಹ ಘರ್ಷಣೆ, ತಿಕ್ಕಾಟಗಳಿಗೆ ಒಳಗಾಗುತ್ತಿರುವಂತಹ ವಿಚಾರಗಳು ಅದನ್ನು

ವಿಮರ್ಶಕರು ಈರೀತಿ ಒಂದು ಕಜ್ಜಿ ರೋಗಕ್ಕೆ ಹೋಲಿಸಿ ಹೇಳುತ್ತಿದ್ದಾರೆ.

ಈ ರೋಗವೂ ಸಹ ಮನುಷ್ಯನನ್ನು ಹಿಂಸಿಸುವಂತಹ, ನರಳಿಸುವಂತಹದ್ದಾಗಿರುವುದರಿಂದ ಅದೇ ರೀತಿ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರವೇ ಸಿಗದೆ ಇರುವ ದೃಷ್ಟಿಯಿಂದ ಲೇಖಕರು ಈ ರೀತಿಯಾದಂತಹ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ವೈಕಂರವರ ಸಾಮಾಜಿಕ ಬದಲಾವಣೆಯನ್ನು ಬಯಸುವಂತಹ ಉದ್ದೇಶವಿರುವುದನ್ನು ಈ ಕತೆಗಳ ಮೂಲಕ ಕಾಣಬಹುದಾಗಿದೆ ಅವುಗಳೆಂದರೆ.

| | |
|---|---|
| ಜೀವನದ ಕರಿನೆರಳು | ಲೋಕ ಪ್ರಸಿದ್ಧ ಮೂಗು |
| ಶಬ್ದಗಳು | ಹೀಗೊಬ್ಬ ಮನುಷ್ಯ |
| ಜನ್ಮದಿನ | ಬಂಗಾರಿ |
| ಸಂಜೆಯ ಪ್ರಾರ್ಥನೆ | ನೀಲಿ ಕಂದೀಲು |
| ವಾರಸುದಾರರು | ಯುದ್ಧ ಮುಗಿವುದಾದರೆ, |

ಈ ಮೇಲಿನ ಎಲ್ಲಾ ಕತೆಗಳು ಸಾಮಾಜಿಕ ಸ್ಥಿತಿಗತಿಯನ್ನು ಪ್ರತಿಬಿಂಬಿಸುವಂತಹ ಕತೆಗಳಾಗಿ ಕಂಡುಬರುತ್ತವೆ. ಸಮಾಜದ ಆಗುಹೋಗಿನ ಬಗ್ಗೆ ಹಾಗು ಸಾಮಾಜಿಕ ಪ್ರಜ್ಞೆಯ ಬಗ್ಗೆ ಅರಿವಿರುವ ವಿಚಾರಗಳು, ಸಮಾನತೆಯನ್ನು ಬಯಸುವಂತಹ ವ್ಯಕ್ತಿತ್ವ ಕತೆಗಳಲ್ಲಿವೆ. ಎಲ್ಲ ರೀತಿಯ ವರ್ಗ ಧರ್ಮಗಳ ಬೇದವಿಲ್ಲದೆ ವೈಕಂ ರವರು ಅವರ ಕತೆಗಳಲ್ಲಿ ಸಾಮಾಜಿಕ ಬದಲಾವಣೆಯ ಅಂಶವನ್ನು ಹಿಡಿದಿಟ್ಟಿದ್ದಾರೆ. ವಾಸ್ತವ ಜಗತ್ತಿಗೂ ಕೂಡ ಹತ್ತಿರವಾಗುವಂತಹ ಆಲೋಚನೆಗಳನ್ನು ಇವರ ಕತೆಗಳು ಪ್ರತಿಬಿಂಬಿಸುತ್ತವೆ.

ಈ ರೀತಿಯಾಗಿ ಬಷೀರ್‌ರವರು ತಮ್ಮ ಕತೆಗಳಲ್ಲಿ ಕೌಟುಂಬಿಕ ಜೀವನದ ವಾಸ್ತವ ಚಿತ್ರಣವನ್ನು ಇಂದಿಗೂ/ಎಲ್ಲಾ ಕಾಲಕ್ಕೂ ಅನ್ವಯವಾಗುವಂತೆ ತಮ್ಮ ಕತೆಗಳಲ್ಲಿ ಹಿಡಿದಿಡುವಂತಹ ಭಾಷಾಶಕ್ತಿ ಇತ್ತು ಎಂಬುದನ್ನು ನನ್ನ ಅಧ್ಯಯನದಲ್ಲಿ ಪರಿಶೀಲಿಸಿದ್ದೇನೆ

**ನಿಸ್ವಾರ್ಥ ಪ್ರೀತಿಯ ರೂಪಗಳ ಅನಾವರಣ**

ವೈಕಂ ಬಷೀರ್‌ರವರ ಕೆಲವು ಕತೆಗಳಲ್ಲಿ ಕಂಡುಬರುವ ನಿಷ್ಕಲ್ಮಷ ಪ್ರೀತಿಗಾಗಿ ಹಂಬಲಿಸುವ ಸಂದರ್ಭಗಳು ಹಾಗೂ ಇವು ಧರ್ಮ, ಜಾತಿಗಳನ್ನು ಮೀರುವಂತಹ ಶಕ್ತಿಯನ್ನು ಹೊಂದಿದೆ, ಇವರ ಕತೆಗಳಲ್ಲಿ ಪ್ರೀತಿಯೂ ಸಹ ಬದುಕಿನ ಒಂದು ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಆದ್ದರಿಂದ

ಇವರ ಕತೆಗಳಲ್ಲಿ ಪ್ರೀತಿಗೆ ಮಹತ್ವವನ್ನು ನೀಡಿರುವುದು ಗಮನಾರ್ಹವಾದದ್ದು, ಜೀವನದ ಒಂದು ಭಾಗವಾಗಿ ಪ್ರೀತಿಯನ್ನು ಕಾಣುವ ಮನೋಭಾವ ಉಳ್ಳಂತಹ ವ್ಯಕ್ತಿಯಾಗಿ ವೈಕಂ ಬಷೀರ್‌ರವರು ಕಂಡುಬರುತ್ತಾರೆ, ಬಷೀರ್ ಒಬ್ಬ ಪ್ರೇಮಿಯೂ ಹೌದು ಮಹಾ ಹುಚ್ಚನಂತೆ ಕಂಡುಬರುತ್ತಾರೆ. ಬಹುತೇಕ ಸಂಧರ್ಭಗಳಲ್ಲಿ ಪ್ರೀತಿಯನ್ನು ಪಡೆಯಲು ಮಾಡಿದಂತಹ ಸಾಹಸಗಳೇ ಹೆಚ್ಚಾಗಿ ಕಂಡುಬರುತ್ತವೆ.

"ಜೀವನದ ಕರಿನೆರಳು" ಈ ಕಥೆಯಲ್ಲಿ ಕಂಡುಬರುವಂತಹ ಒಬ್ಬ ವೇಶ್ಯೆಯ ಪ್ರೀತಿಗೆ ಸಂಬಂಧಿಸಿದಂತೆ ಕಥೆ ವಿವರಿಸುತ್ತಾ ಹೋಗುತ್ತದೆ. ವಸಂತಕುಮಾರಿ ಇವಳು 'ಮಹಮ್ಮದ್ ಅಬ್ಬಾಸ್' ನನ್ನು ದಿನಾಲೂ ನೋಡುತ್ತಿರುತ್ತಾಳೆ. ಇವನಲ್ಲಿ ಏನೋ ಒಂದು ರೀತಿಯ ಗೌರವ ಭಾವ ಅದನ್ನೇ ಅಬ್ಬಾಸ್‌ನು ತಪ್ಪಾಗಿ, ತಾತ್ಸಾರವಾಗಿ, ನಿರ್ಲಕ್ಷವಾಗಿ ನೋಡುತ್ತಾನೆ. ಅವಳ ನೋಟದಲ್ಲಿ ಅನುಕಂಪವಿತ್ತು. ಸ್ನೇಹಕ್ಕಾಗಿ ಹಂಬಲಿಸುವುದು ವಸಂತ ಕುಮಾರಿ ಯಾವುದೋ ಸಂದರ್ಭ ಸನ್ನಿವೇಶಗಳಿಗೆ ಬಲಿಯಾಗಿ ಅವಳು ಇಂತಹ ವೃತ್ತಿಯನ್ನು ಅವಲಂಬಿಸಿರಬಹುದು. ಅವಳು ಮನಃಪೂರ್ವಕವಾಗಿ ವೈಶ್ಯಾ ವೃತ್ತಿಯನ್ನು ಬಯಸಿದವಳಲ್ಲ ಎನ್ನುವ ಸತ್ಯಾಂಶವು ಕಥೆಯಲ್ಲಿ ಕಂಡು ಬರುತ್ತದೆ.

ವಸಂತಕುಮಾರಿಯ ನೋಟದಲ್ಲಿ ನಿಷ್ಕಲ್ಮಷತೆ ಎನ್ನುವುದು ಕಂಡುಬರುತ್ತಿತ್ತು. ಆದರೆ ಅಬ್ಬಾಸ್‌ನ ದೃಷ್ಠಿಯಲ್ಲಿ " ಅವಳು ಒಬ್ಬ ಸೂಳೆ, ಅದೆಷ್ಟು ಜನರನ್ನು ನೋಡಿ ಅವಳು ನಗಾಡಿಲ್ಲ! ಅದೆಷ್ಟು ಜನರನ್ನು ಅವಳು ಚುಂಬಿಸಿಲ್ಲ.. ಅದೆಷ್ಟು ಜನರಿಗವಳು ..! ಭಯಂಕರ ರೋಗಗಳ ಬಿತ್ತುವ ,ಕಾಸಿಗೆ ಸಕಲವನ್ನೂ ಅಡವಿಡುವ ಪರದೇಶಿಗಳು ಎಂಬ ಭಾವನೆ ಇವನ ಮನಸ್ಸಿನಾಳದಲ್ಲಿ ಮನೆ ಮಾಡಿತ್ತು ಆದರೂ ಇಂತಹ ಜನರನ್ನು ಕಂಡರೆ ಭಯ.*17

ಅಬ್ಬಾಸ್ ಇರುವ ರೂಮಿನ ಬಾಡಿಗೆ ಕೊಡದೆ ಎಷ್ಟೋ ದಿನಗಳಾಗಿರುತ್ತವೆ ಮನೆಯ ಯಜಮಾನ ಬಂದು ಹೀನಾ ಮಾನವಾಗಿ ಬೈಯುತ್ತಾನೆ. ಇದನ್ನೆಲ್ಲಾ ಕೇಳಿಸಿಕೊಂಡಿದ್ದ ವಸಂತಕುಮಾರಿಯು ಅಬ್ಬಾಸ್‌ನ ರೂಮಿಗೆ ಧೈರ್ಯ ಮಾಡಿ ಬರುತ್ತಾಳೆ. ತಿಂಡಿ ಮತ್ತು ಚಾಹ ವನ್ನು ತಂದಿರುವುದಾಗಿ ಹೇಳಿದಳು. (ಅಲ್ಲಿಗೆ ಅಬ್ಬಾಸ್ ಮೂರು ದಿನದಿಂದ ಉಪವಾಸವಿದ್ದ ವಿಚಾರ ಇವಳಿಗೆ ತಿಳಿದಿರುತ್ತದೆ) ಇವಳನ್ನು ಕಂಡೊಡನೆಯೇ ಅಬ್ಬಾಸ್‌ನ ಮುಖ ಕೆಂಪೇರುತ್ತದೆ. ಅವನು ನನ್ನ ಮನೆತನ, ಸ್ವಾಭಿಮಾನಗಳು ಹಾಳಾಯಿತು ಎಂಬ ಭಾವವನ್ನು ವ್ಯಕ್ತಪಡಿಸುತ್ತಾನೆ. ಅವನ ಮನಸ್ಥಿತಿ ಯಾವ ರೀತಿ ಯೋಚಿಸುತ್ತಿದೆ ಎಂದರೆ, ಒಬ್ಬ ಸೂಳೆ ನನ್ನ ಮನೆಗೆ ಬಂದು ಅಪವಿತ್ರಗೊಳಿಸಿದ್ದು, ಮನೆತನ, ಘನತೆ, ಗೌರವಕ್ಕೆ ಧಕ್ಕೆ ಉಂಟಾಯಿತೆಂಬ ಭಾವದಿಂದ ವರ್ತಿಸುತ್ತಾನೆ. ಇಲ್ಲಿ

ಗಮನಿಸಬಹುದಾದ ಬಹಳ ಸೂಕ್ಷ್ಮ ವಿಚಾರವೊಂದಿದೆ. ಮನೆಯ ಯಜಮಾನ ಬಂದು ಹೀನಾಮಾನವಾಗಿ ಬೈದಿರುವುದು ತಪ್ಪಲ್ಲ. ಆಗ ಇವನ ಘನತೆ, ಗೌರವ, ಮನೆತನದ ಸ್ವಾಭಿಮಾನ ಹಾಳಾಗಲಿಲ್ಲವೇ ?

ಎಂಬುದು ನನ್ನಲ್ಲಿ ಪ್ರಶ್ನಾರ್ಥಕವಾಗಿ ಉಳಿದಿದೆ. ಅಥವಾ ಪ್ರದರ್ಶನವಾದಿ ನಿಲುವುಗಳನ್ನು ಲೇಖಕರು ಪಾತ್ರಗಳ ಮೂಲಕ ಅನಾವರಣಗೊಂಡಿದೆ. ಆ ಹೆಣ್ಣು ಇವನ ಮೇಲಿನ ಮಾನವೀಯತೆಯಿಂದಲೇ ಬಂದಿರಬಹುದು ಆದರೆ ಅಬ್ಬಾಸ್ ಇದಕ್ಕೆ ಕೊಡುವಂತಹ ಉತ್ತರ "ನನ್ನ ಹತ್ರ ಕಾಸಿಲ್ಲ ಇಂಥ ಸ್ಥಿತಿಯಲ್ಲೂ ನಿಮಗೆ ಮನುಷ್ಯರನ್ನು ಸುಮ್ಮನೆ ಬಿಡೋಕಾಗಲ್ಲ? ಹೋಗು ನನಗಿದು ಬೇಡ ! ನಾನು

ದುಡ್ಡಗಾಗಿ ಬಂದಿಲ್ಲ ....... ನನಗೆ ನಿಮ್ಮ ಹಣ ಬೇಡ, ಆಗ ಅಬ್ಬಾಸನು ಕೋಪದಿಂದ ಇವಳನ್ನು "ದುಡ್ಡಿಗಾಗಿ ಅಲ್ವಾ ? ಮತ್ತೇನಕ್ಕೆ ಬಂದೆ ನನ್ನ ಮರುಳು ಮಾಡಲಿಕ್ಕಾ?.. ಹೃದಯವಿಲ್ಲದ ಪ್ರಾಣಿಗಳು.. ತೊಲಗಿಲ್ಲಿಂದ!" ಎಂದು ಗದರುತ್ತಾನೆ. *18

ಅಬ್ಬಾಸ್‌ನು ನಿಜವಾದ ಪ್ರೀತಿ, ಮಮತೆ, ವಾತ್ಸಲ್ಯ ಇವುಗಳನ್ನು ಗುರುತಿಸುವಲ್ಲಿ ವಿಫಲವಾಗಿರುತ್ತಾನೆ.

ಇವನು ಸದಾ ವಸಂತಕುಮಾರಿಯನ್ನು ಅನುಮಾನದಿಂದ ನೋಡುವುದು, ಈ ಕತೆಯಲ್ಲಿ ಕಂಡುಬರುತ್ತದೆ. ಆದರೆ, ಇದಕ್ಕೆ ವ್ಯತಿರಿಕ್ತವಾಗಿ ವಸಂತಕುಮಾರಿಯೂ ಇವನಲ್ಲಿ ನಿರ್ಮಲವಾದ ಪ್ರೀತಿಯನ್ನು ಭಾವದಿಂದಲೇ, ಇವನ ಸ್ನೇಹವನ್ನು ಬಯಸುವಂತಹ ಒಳ್ಳೆಯ ಮನಸ್ಸಿಗೆ ಇವನು ಘಾಸಿಗೊಳಿಸುತ್ತಾನೆ ಇವಳ ಒಳ್ಳೆಯ ತನಕ್ಕೆ ಪರಿಶುದ್ದವಾದ ಪ್ರೀತಿಯನ್ನು ಅಬ್ಬಾಸ್ ನಂಬದೆ ಅವಳು ದೇಹವನ್ನು ಮಾರಿಕೊಳ್ಳುವಂತವಳು ಎಂದು ಕೀಳಾಗಿ ಕಾಣುತ್ತಾನೆ ಆದರೆ ಈ ಕತೆಯ ಕೊನೆ ಭಾಗದಲ್ಲಿ ಅಬ್ಬಾಸ್‌ನಿಗೆ ಅವಳ ಮೇಲೆ ಪ್ರೀತಿ, ಗೌರವ ಬರುತ್ತದೆ.

ಅಬ್ಬಾಸ್ ಮೂರು ತಿಂಗಳಿಂದ ಮನೆಗೆ ಬರದೆ ಎಲ್ಲೋ ಕೆಲಸಕ್ಕೆ ಸೇರಿಕೊಳ್ಳುದು ಆದರೆ ಅವನಿಗಾಗಿ ಅವಳು ಕಾಯುತ್ತಿರುತ್ತಾಳೆ. ಅವನ ಮನೆ ಬಾಡಿಗೆಯನ್ನು ಇವಳೆ ಪ್ರತಿ ತಿಂಗಳು ಕಟ್ಟುತ್ತಿರುತ್ತಾಳೆ. ಅವನ ನೆನಪಲ್ಲಿಯೆ ಅನಾರೋಗ್ಯ ಪೀಡಿತಳಾಗುತ್ತಾಳೆ.

"ಒಂದು ಘಟನೆ, ಒಂದುಚಿತ್ರ ಅದು ಸದಾ ನನ್ನ ಹಿಂಬಾಲಿಸುತ್ತಾ, ನೋಯಿಸುತ್ತಾ ಇದೆ ಸ್ನೇಹಪೂರಿತವಾದ ಆ ಕಣ್ಣಿನನೊಳಗೆ ಎಂದು ಅಬ್ಬಾಸ್ ಗೆಳೆಯನಿಗೆ ಹೇಳಿದನು. ಅಬ್ಬಾಸ್ ತನ್ನ ಸ್ನೇಹಿತನ ಮಾತಿನಂತೆ ನೀನೇಕೆ ಅವಳನ್ನು ಮದುವೆಯಾಗಬಾರದು ಎಂದು ಕೇಳುತ್ತಾನೆ. ಆಗ ಅಬ್ಬಾಸ್ ತಬ್ಬಿಬ್ಬಾದ ಸೂಳೆಯನ್ನು ಹೆಂಡತಿ ಮಾಡಿಕೊಳ್ಳುವುದೆ,? ಆಗುವುದಿಲ್ಲ ಎಷ್ಟು ಜನ ಅವಳನ್ನು ತಬ್ಬಿಕೊಂಡಿರಬಹುದು, ಎಷ್ಟು ಜನ ಅವಳನ್ನು ಚುಂಬಿಸಿರಬಹುದು, ಎಷ್ಟು ಜನರಿಗವಳು ತನ್ನನ್ನೆ

ಮಾರಿಕೊಂಡಿರಬಹುದು? ಎಷ್ಟು  ಎಷ್ಟು ಈ ರೀತಿಯಾಗಿ ಇಬ್ಬರೂ ಚರ್ಚೆಮಾಡುತ್ತಾರೆ ಬೇಕಾಗಿ ಅವಳು ಆ ವೃತ್ತಿಯನ್ನು ಮಾಡಿಲಿಕ್ಕಿಲ್ಲ ಬದುಕಲು ಇದಕ್ಕಿಂತ ಬೇರೇನಾದರೂ ಮಾರ್ಗಗಳಿದ್ದರೆ ಹೆಚ್ಚಿನ ಹೆಂಗಸರು ಈ ದಾರಿ ಹಿಡಿಯುವುದಿಲ್ಲ.

ಇವನ ಗೆಳೆಯ ಹೇಳಿದ ಮಾತು: ತಾಳಲಾರದ ಹಸಿವು, ಬಿಡಲಾರದಂತ ಅಗತ್ಯಗಳು ಅವಳನ್ನು ಸೂಳೆಯನ್ನಾಗಿ ಮಾಡಿರಬೇಕು, ಅವಳು ಮನ:ಪೂರ್ವಕವಾಗಿ ಅದಾವುದನ್ನು ಮಾಡಿರಲಿಕ್ಕಿಲ್ಲ ಅವಳ ಹೃದಯ ನಿಜವಾದ ಪ್ರೀತಿಗಾಗಿ ಕನವರಿಸುತ್ತಿದೆ. ಅಂದರೆ ನನಗನಿಸುತ್ತೆ ನೀನೊಮ್ಮೆ ಯೋಚಿಸಿನೋಡು ಹಣವಿಲ್ಲದೆ, ತನ್ನವರಾರು ಇಲ್ಲವೆ ಆ ಹಾಳು ಗುಡಿಸಲಿನಲ್ಲಿ ನರಕದ ಬದುಕು ಬದುಕುವಾಗಲೂ ಅವಳು ನಿನ್ನ ಮರಳು ಮಾಡಲು ಪ್ರಯತ್ನಿಸಬೇಕು? ಥೇ .. ಪ್ರೇಮ ತುಂಬಿ ಅವಳ ಹೃದಯವನ್ನೆ ನಿನಗೆ ಕಾಣಿಕೆಯಾಗಿ ತಂದಿದ್ದಳು ಆದರೆ ನೀನದನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದ್ದೀಯಾ'.

ಈ ಎಲ್ಲ ವಿಚಾರಗಳಿಂದ ವಸಂತಕುಮಾರಿಯನ್ನು ನೋಡುವ ಅವಳ ಪ್ರೀತಿಗಾಗಿ ಹಪ ಹಪಿಸುವಂತಹ ಮನಸ್ಥಿತಿ ಅಬ್ಬಾಸ್‌ನಿಗೆ ಉಂಟಾಯಿತು ಅವಳನ್ನು ಕಾಣಲು ಹೋದನು " ಪ್ರೀತಿ ತುಂಬಿದ ನಾಲ್ಕು ಕಣ್ಣುಗಳು ಪರಸ್ಪರ ಕೋಡಿದವು. ಎರಡೂ ಮುಖಗಳಲ್ಲಿ ನಗು ನಲಿಯಿತು".

ನಿಷ್ಕಲ್ಮಷತೆ ಸ್ವಾರ್ಥತೆ ಇಲ್ಲದೆ ಬರುವಂತಹ ಪ್ರೀತಿ ನಿಜವಾದ ಪ್ರೀತಿಯಾಗಿರುತ್ತದೆ ವೈಕಂ ಮಹಮ್ಮದ್ ಬಷೀರ್ ರವರ ಕತೆಗಳಲ್ಲಿ ಕಂಡುಬರುವಂತಹ ಪ್ರೀತಿಯು ಅದರ ಪಾವಿತ್ರತೆಯನ್ನು ಕಾಯ್ದು ಕೊಂಡಿರುತ್ತದೆ ಇಂತಹ ಅಂಶವನ್ನು ನನ್ನ ಅಧ್ಯಯನದ ದೃಷ್ಟಿಯಿಂದ ಪರಿಶೀಲಿಸಿದ್ದೇನೆ.

"ಪ್ರೇಮ ಪತ್ರ ಮತ್ತು ಹೂಬಾಳೆ" ಈ ಎರಡೂ ಕತೆಗಳಲ್ಲಿ ಪ್ರೀತಿಗಾಗಿ ಹಂಬಲಿಸುವಂತಹ ಹುಡುಗರನ್ನು ಕಾಣಬಹುದು. ಪ್ರೀತಿಯು ಫಲಿಸಬೇಕಾದರೆ ಇವರು ಮಾಡುವಂತಹ ಸಾಹಸವನ್ನು ಸಹ ಈ ಕತೆಗಳು ಒಳಗೊಂಡಿವೆ. ಪ್ರೇಮಪತ್ರದಲ್ಲಿ ಕೇಶವ್ ನಾಯಕ್ ಇವನು ಬ್ಯಾಂಕ್ ಉದ್ಯಮಿಯಾಗಿರುತ್ತಾನೆ. ಇವರು ಮನೆಯ ಬಳಿ ಇವರು ಸರೂಮಾ ಎಂಬ ಹುಡುಗಿಯನ್ನು ಪ್ರೀತಿಸುತ್ತಾರೆ. ಇವರಲ್ಲಿ ಯಾವುದೇ ರೀತಿ ಸ್ವಾರ್ಥವಾಗಲಿ, ಕೆಟ್ಟಭಾವನೆಯಾಗಲಿ ಇರದೆ ಇರುವುದನ್ನು ಕಾಣುವುದು ಇವಳಿಗೆ ಪ್ರೇಮ ಪತ್ರವನ್ನು ಬರೆಯುತ್ತಿರುತ್ತಾನೆ. ಆದರೆ ಇವಳಿಗೂ ಪ್ರೀತಿಯ ಭಾವನೆ ಇದ್ದರೂ ತೋರಿಸಿಕೊಳ್ಳದೇ, ಆ ಪತ್ರವನ್ನು ಹರಿದು ಬಿಸಾಕುತ್ತಾಳೆ. ಕೊನೆಯಲ್ಲಿ ಇಬ್ಬರೂ ಪ್ರೀತಿಯನ್ನು ಒಪ್ಪಿಕೊಂಡರು.*19

ಸರುಮಾಳು ಕೇಶವ್‌ನಿಗೆ ಹೇಳುತ್ತಾಳೆ ನಿನ್ನನ್ನು ಪ್ರೀತಿ ಮಾಡುವುದಕ್ಕೆ ನನಗೆ ಸಂಬಳಕೊಡಬೇಕೆಂದು ಹೇಳುತ್ತಾಳೆ. ಆದರೆ ಆ ಹಣವನ್ನು ಕೊನೆಯಲ್ಲಿ ತಮ್ಮಿಬ್ಬರ ಜೀವನಕ್ಕೆ

ಬಳಸಿರುತ್ತಾರೆ ಆದರೆ ಇದರಿಂದ ಇವರಿಬ್ಬರ ಪ್ರೀತಿ ವ್ಯವಹಾರಿಕವಾಗಿ ಪ್ರಾರಂಭಿಸಿದರೂ ನಂತರ ಅದು ನಿಸ್ವಾರ್ಥ, ನಿಷ್ಕಲ್ಮಶವಾದ ರೀತಿಯಲ್ಲಿ ಅವರಿಬ್ಬರ ಸಂಬಂದವನ್ನು ವೈಕಂರವರು ಚಿತ್ರಿಸಿದ್ದಾರೆ.

ನಿಸ್ವಾರ್ಥ ತುಂಬಿದ ಪ್ರೀತಿಯಲ್ಲಿ ಯಾವುದೇ ರೀತಿಯ ಜಾತಿ, ಧರ್ಮ, ಬೇದವಿಲ್ಲದೆ ಇಬ್ಬರೂ ಧರ್ಮವೇ ಬೇಡ ವೆಂಬ ನಿರ್ಧಾರಕ್ಕೆ ಬರುತ್ತಾರೆ. ನಿಜವಾದ ಪ್ರೀತಿಗೆ ಯಾವ ಧರ್ಮ ಜಾತಿಯ ಅಂತರವಿರುವುದಿಲ್ಲ ಎಂಬ ವಿಚಾರವನ್ನು ವೈಕಂ ರವರ ಕತೆಗಳಲ್ಲಿ ಗಮನಾರ್ಹವಾದದ್ದು.

'ಹೂಬಾಳೆ' ಎಂಬ ಕತೆಯಲ್ಲಿಯೂ ಅಬ್ದುಲ್ ಕಾದರ್ ಸಾಬರೂ ಸಹ ಜಮೀಲಾಬೀಬಿಯನ್ನು ಪಡೆಯುವುದಕ್ಕೆ ಮಾಡಿದಂತಹ ಸಾಹಸಗಳು ಕೊನೆಯವರೆಗೂ ಹೂಬಾಳೆ ತರುವುದರೊಂದಿಗೆ ಮುಗಿಯುತ್ತದೆ ಜಮೀಲಾಬೀಬಿಯ ತುಂಟತನ, ಉದಾಸೀನಭಾವ, ಇವಳಿಗೆ ಯಾರ ಪ್ರೀತಿಯನ್ನು ಸಹ ಲೆಕ್ಕಿಸುತ್ತಿರಲಿಲ್ಲ/ತಿರಸ್ಕರಿಸುತ್ತಿದ್ದಳು. ಇವಳನ್ನು ಪ್ರೀತಿಸಿ ವಿವಾಹವಾಗುವುದಕ್ಕೆ ಅಬ್ದುಲ್ ಖಾದರ್ ತುಂಬಾ ಕಷ್ಟಪಡುತ್ತಾ೦? ಆದರೆ ನಂತರದ ದಿನಗಳಲ್ಲಿ ಸಾಂಪ್ರಾದಾಯಿಕ ಸಂಸಾರದ ರೀತಿಯನ್ನೇ ಮುಂದುವರೆಸುತ್ತಾನೆ. *20

" ಏಕಾಂತದ ತೀರ" : ರಸ್ತೆಯಲ್ಲಿ ಹೂವನ್ನು ಕೊಟ್ಟ ಒಬ್ಬ ಅಪರಿಚಿತನ ಬಗ್ಗೆ ನೋಡಿದ ತಕ್ಷಣವೇ ಇಬ್ಬರಲ್ಲಿ ಪೀತಿಯ ಅನುರಾಗವಾಗುತ್ತದೆ. ಆದರೆ ಈ ಇಬ್ಬರೂ ಮತ್ತೆ ಯಾವತ್ತೂ ಬೇಟಿಯಾಗುವುದಿಲ್ಲ, ಅನೇಕ ಅಡ್ಡಿ ಅಡೆತಡೆಗಳು ಎದುರಾಗುತ್ತದೆ. ಗೆಳತಿ ಅಮ್ಮನ ಬಳಿ ಹೇಳಿಕೋಳ್ಳಲಾಗದೆ ವೇದನೆ, ಸಂಕಟ ಪಡುವ ಸ್ಥಿತಿಯನ್ನು ಕಾಣಬಹುದು ಮತ್ತೆ ಆ ಹುಡುಗನ ಪ್ರೀತಿಗಾಗಿ ಅವನ ನಿರೀಕ್ಷೆಗಾಗಿ ಇಬ್ಬರೂ ಮುಂದಿನ ದಿನಗಳಿಗಾಗಿ ಮತ್ತು ನಿರ್ಮಲ ಪ್ರೀತಿ ನಿಸ್ವಾರ್ಥ ಪ್ರೀತಿಯನ್ನು ಹುಡುಕುವುದನ್ನು ಇಡೀ ಕತೆ ಚಿತ್ರಿಸುತ್ತದೆ.

"ಗೋಡೆಗಳು" ಮತ್ತು "ಒಂದು ಹಳೆಯ ಪ್ರೇಮಕಥೆ" ಇದರಲ್ಲಿ ಪ್ರೀತಿಗೆ ಸಾಧನವಾಗಿ ಕೆಮ್ಮು ಮತ್ತು ಕೋಲುಗಳನ್ನೆ ಬಳಸುವಂತಹ ಸ್ಥಿತಿಯನ್ನು ಕಾಣುತ್ತವೆ, ಗೋಡೇಗಳು ಕತೆಯಲ್ಲಿ ಲೇಖಕ ನಾರಾಯಿಣಿಯ ಪಾತ್ರದಲ್ಲಿ ಯಾವುದೇ ರೀತಿಯ ಸ್ವಾರ್ಥತೋರಲಿಲ್ಲ. ಇರಲಿಲ್ಲ ಸ್ನೇಹ ಪರಿಚಯವಾಗಿ, ಪ್ರೀತಿಯಾಗಿ

ಬೆಳೆಯುತ್ತದೆ ಬೇಟಿಮಾಡುವುದಕ್ಕೆ ಸೂಚನೆ ಒಣಗಿದ ಕೋಲು ಕಂಡು ಬರುತ್ತದೆ. ಮತ್ತು ಕೊನೆಯಲ್ಲಿ ಇಬ್ಬರೂ ಬೇಟಿಯಾಗುವ ದಿನದಂದು ಗುಲಾಬಿ ಹೂ ಇಟ್ಟುಕೊಂಡಿರ ಬೇಕು ಎನ್ನುವಂತಹ ಸಂಕೇತಗಳನ್ನು ಕತೆಗಳಲ್ಲಿ ಕಂಡುಬರುತ್ತದೆ. ಬಷಿರ್ (ಲೇಖಕ) ಗೆ ಬಿಡುಗಡೆ ದಿನ ಅನಿರೀಕ್ಷಿತವಾಗಿ ಬರುತ್ತದ? ಅವನ ಮನಸ್ಸಿನಲ್ಲಿ ಬಿಡುಗಡೆಗೊಳ್ಳುವುದಕ್ಕೆ ಇಷ್ಟವಿರುವುದಿಲ್ಲ. ಈ ಅಂಶಗಳೆಲ್ಲವೂ ಕಂಡುಬರುವುದು ವೈಕಂ ಕತೆಗಳಲ್ಲಿ ಬಷೀರ್ ರವರ ಮನಸ್ಸಿನಲ್ಲಿದ್ದ ಮುಗ್ದತೆ, ಇಬ್ಬರ ಪ್ರೀತಿಯೂ ನಿಸ್ವಾರ್ಥತೆ ಕಂಡುಬರುತ್ತದೆ. *21

"ಒಂದು ಹಳೆಯ ಪ್ರೇಮ ಕಥೆ" ಪ್ರೀತಿಸಿದ ಹುಡುಗಿಯಿಂದ ನಗುವುದನ್ನು ಕಲಿತ 'ನಗು' ಎನ್ನುವುದು ದೌರ್ಬಲ್ಯದ ಸಂಕೇತವನ್ನು ಕೈ ಬಿಟ್ಟನು. ಪ್ರೀತಿಗಾಗಿ ಆ ಹುಡುಗಿಯನ್ನು ನೋಡುವುದಕ್ಕೆ ತುಂಬಾ ಸಾಹಸ ಮಾಡಬೇಕಾಗುತ್ತದೆ. ಮನೆಯ ಕಾಂಪೌಂಡು ಗೋಡೆ ಮೇಲೆ ಹತ್ತಿ ನಡೆದುಕೊಂಡು ಸುಮಾರು ದೂರ ಹೋಗಬೇಕು, ಈ ಹುಡುಗಿಗೂ ಸಹ ಮನೆಯ ದಿಗ್ಬಂದನದ ವಾತಾವರಣದಿಂದ ದೂರವಾಗಿ ತನನ್ನು ಪ್ರೀತಿಸುವಂತಹ ಮನಸ್ಸುಳ್ಳವನು ಸಿಕ್ಕಾಗ ಒಪ್ಪುವುದು ಇವಳಲ್ಲಿರುವ ನಿಸ್ವಾರ್ಥ ಪ್ರೀತಿಯನ್ನು ಹುಡುಕುವುದು ಕಂಡುಬರುತ್ತದೆ. ಈ ರೀತಿಯಾಗಿ ವೈಕಂ ಕತೆಗಳಲ್ಲಿ ನಿಸ್ವಾರ್ಥ ಪ್ರೀತಿ ಅನಾವರಣಗೊಂಡಿದೆ. *22

ಕನ್ನಡದಲ್ಲಿ ಮಾಸ್ತಿಯವರ ಮತ್ತು ಕುವೆಂಪುರವರ ಕತೆಗಳು ಹೇಗೆ ಮಾನವೀಯತೆಯ ಹುಡುಕಾಟವನ್ನು ನಡೆಸುತ್ತವೆಯೋ ಹಾಗೆಯೇ ವೈಕಂ ಕತೆಗಳ ಚಿತ್ರಣದಲ್ಲೂ ಈ ಅಂಶವನ್ನು ಗಮನಿಸಿದ್ದೇನೆ.

**ಕೊನೆಟಿಪ್ಪಣಿ:**

*1. ಕನ್ನಡ ಸಾಹಿತ್ಯ ಅಧ್ಯಯನ ಭಾಗ-7 ಪುಟ 118-140

*2. ವೈಕಂ ಕತೆಗಳು ಪುಟ 88

*3 .. ಕನ್ನಡ ಸಾಹಿತ್ಯ ಅಧ್ಯಯನ ಭಾಗ-7 ಪುಟ

*4. ಮಲಯಾಳಂನ ಶ್ರೇಷ್ಠ ಕತೆಗಳಕ್ಕಿ ಪುಟ25-26

*5, ವೈಕಂ ಕತೆಗಳು ಪುಟ 21-22

*6. ವೈಕಂ ಕತೆಗಳು ಪುಟ 48-60

*7. ವೈಕಂ ಕತೆಗಳು ಪುಟ 72-79

*8. ವೈಕಂ ಕತೆಗಳು ಪುಟ 68-71

*9. ವೈಕಂ ಕತೆಗಳು (ಪುಟ 1-30)

*10. ವೈಕಂ ಕತೆಗಳು ಪುಟ 31-43

*11. ಆಯ್ದ ಮಲಯಾಳಂ ಶ್ರೇಷ್ಠ ಕತೆಗಳು ಪುಟ 73-78

*12. ಮಲಯಾಳಂನ ಶ್ರೇಷ್ಠ ಕತೆಗಳು ಪುಟ 21-22

*13. . ಮಲಯಾಳಂನ ಶ್ರೇಷ್ಠ ಕತೆಗಳು ಪುಟ 25-26

*14. . ಮಲಯಾಳಂನ ಶ್ರೇಷ್ಠ ಕತೆಗಳು ಪುಟ 68-71

*15. ವೈಕಂ ಕತೆಗಳು ಪುಟ 127-145

*16. ವೈಕಂ ಕತೆಗಳು ಪುಟ 47

*17. ವೈಕಂ ಕತೆಗಳು ಪುಟ 134

*18. . ವೈಕಂ ಕತೆಗಳು ಪುಟ 135-136

*19. . ವೈಕಂ ಕತೆಗಳು ಪುಟ 1-30

*20. . ವೈಕಂ ಕತೆಗಳು ಪುಟ 31-43

*21. . ವೈಕಂ ಕತೆಗಳು ಪುಟ 80-87*22. . ವೈಕಂ ಕತೆಗಳು ಪುಟ 61-67

# ಅಧ್ಯಾಯ 5

## ವೈಕಂ ಮಹಮ್ಮದ್ ಬಷೀರ್‌ರವರ ಕತೆಗಳಲ್ಲಿನ ಪಾತ್ರ ಚಿತ್ರಣ ಕುರಿತ ವಿಶ್ಲೇಷಣೆ :-

ವೈಕಂ ಮಹಮ್ಮದ್ ಬಷೀರ್‌ರವರ ಕತೆಗಳಲ್ಲಿ ಕಂಡು ಬರುವ ಪ್ರಮುಖ ಪಾತ್ರಗಳ ಬಗ್ಗೆ ಅವುಗಳು ಆ ಕತೆಗೆ ಎಷ್ಟು ಮುಖ್ಯ ಎನ್ನುವಂತಹ ವಿಚಾರಕ್ಕೆ ಸಂಬಂಧಿಸಿದಂತೆ ನನ್ನ ಅದ್ಯಯನದಲ್ಲಿ ತಿಳಿದುಬರುತ್ತದೆ.

ಮೊದಲಿಗೆ "ಜೀವನದ ಕರಿನೆರಳು ಎಂಬ ಕತೆಯಲ್ಲಿ ಕಂಡುಬರುವ "ಮಹಮ್ಮದ್ ಅಬ್ಬಾಸ್" ವಸಂತ ಕುಮಾರಿ ಸ್ನೇಹಿತ ಜಬ್ಬಾರ ಇವರುಗಳ ಪಾತ್ರವು ಈ ಕತೆಯಲ್ಲಿ ಬಹಳ ಮುಖ್ಯವಾಗಿ ಕಂಡುಬರುತ್ತದೆ. ಈ ಕತೆಗಳಿಗೆ ಪಾತ್ರದ ವ್ಯಕ್ತಿತ್ವದಿಂದ ಒಂದು ಪ್ರಾಮುಖ್ಯತೆ ಬರುವುದಕ್ಕೆ ಸಹಾಯಕವಾಗಿದೆ ಮಹಮ್ಮದ್ ಅಬ್ಬಾಸ್‌ನ ವ್ಯಕ್ತಿತ್ವ ಮೊದಲು ತುಂಬಾ ಐಷಾರಾಮಿಯಿಂದ ತುಂಬಿತ್ತು ಹಣವಂತನಾಗಿದ್ದ, ನಂತರ ಇವನು ತೀರಾ ನಿರ್ಗತಿಕನಾಗಿ ತುಂಬಾ ಅವಸ್ಥೆಯನ್ನು ಪಡಬೇಕಾದಂತಹ ಸ್ಥಿತಿಯನ್ನು ತಲುಪಿದನು. ಕೊನೆಗೆ ಮೃಷ್ಟಾನ್ನ ಭೋಜನದಿಂದ ಉಪವಾಸದ ಜೀವನವನ್ನು ಸಹ ಎದುರಿಸಬೇಕಾಗಿ ಬಂದದ್ದನ್ನು ಕಾಣುತ್ತೇವೆ. ಶ್ರೀಮಂತಿಕೆ ಎನ್ನುವಂತಹ ಮನುಷ್ಯನನ್ನು ತನ್ನ ಜೀವನದ ಗುರಿ, ಉದ್ದೇಶದ ಬಗ್ಗೆ ಅಲೋಚಿಸುವಂತೆ ಮಾಡುವುದಿಲ್ಲ. ಶ್ರೀಮಂತಿಕೆ ಹೋದಾಗ ನಿಜವಾದ ಜೀವನ ಎನ್ನುವಂತಹದ್ದು ಅರ್ಥವಾಗುವುದಕ್ಕೆ ಪ್ರಾರಂಭವಾಗುತ್ತದೆ. ಈ ಕತೆಯಲ್ಲಿ ಅಬ್ಬಾಸನ ಪಾತ್ರದ ಮೂಲಕ ಲೇಖಕರು ತಿಳಿಸಬಯಸುವ ವಿಷಯ ಎಂದರೆ, ಶ್ರೀಮಂತಿಕೆ ಎಂಬುದು ಶಾಶ್ವತವಲ್ಲ. ಅದು ನಶ್ವರವಾದ, ಮಾಯಾ ಜೀವನವಾಗಿ ಪರಿಣಮಿಸುತ್ತದೆ. ಮನುಷ್ಯನಿಗೆ ನಿಜಜೀವನದ ದರ್ಶನವನ್ನು ಅಬ್ಬಾಸ್‌ನ ಪಾತ್ರದಿಂದ ತಿಳಿದು ಬರುತ್ತದೆ. ಇದು ನೈಜವಾದ ವಾಸ್ತವ ಸ್ಥಿತಿ ಪ್ರಜ್ಞೆಯನ್ನು ಎಚ್ಚರಿಸುತ್ತದೆ. ಶ್ರೀಮಂತಿಕೆ ಇರುವಾಗ ಹಿಗ್ಗದ, ಬಡತನ ಬಂದಾಗ ಕುಗ್ಗದೆ ಜೀವನವನ್ನು ದೈರ್ಯವಾಗಿ ನಡೆಸಬೇಕೆನ್ನುವಂತಹ ಸಂದೇಶವನ್ನು ಈ ಕತೆಯು ಪ್ರತಿಬಿಂಬಿಸುತ್ತಿದೆ. ಕಷ್ಟ ಎಂಬುದು ನಮ್ಮ ಹಿಂದೆ ಬರುವಂತ ನೆರಳಿನ ರೂಪದಲ್ಲಿ ನಮ್ಮನ್ನು ಬಿಡದೆ ಹಿಂಬಾಲಿಸುತ್ತಲೆ ಇರುತ್ತದೆ. ಕಷ್ಟವನ್ನು ಕರಿಯ ನೆರಳಿಗೆ ಹೋಲಿಸಿದ್ದಾರೆ ಮತ್ತು ವಸಂತ ಕುಮರಿ ಪಾತ್ರದಲ್ಲಿ ಅವಳ ಜೀವನವು ಕತ್ತಲೆಯೇ ತುಂಬಿರುವಂತಹ ಸ್ಥಿತಿಯಲ್ಲಿರುವುದು ಈ ಕತೆಯಲ್ಲಿ ಗುರುತಿಸಬಹುದಾಗಿದೆ. ಅವಳು ಕತ್ತಲೆಯಿಂದ ಬೆಳಕಿನಡೆಗೆ ಬರಬೇಕೆಂಬ ಹಂಬಲವನ್ನು ವ್ಯಕ್ತಪಡಿಸುತ್ತಾಳೆ ಅದಕ್ಕೆ ಅಬ್ಬಾಸ್‌ನ ನೆರವನ್ನು ಯಾಚಿಸುವಂತಹದ್ದು ಅವನು ಅವಳನ್ನೇ ತಿರಸ್ಕೃತ ಭಾವದಿಂದ ನೋಡುತ್ತಾನೆ. ನಂತರ ಮನುಷ್ಯ ಎನ್ನುವಂತವನು ಬದಲಾವಣೆಗೆ ಒಳಗಾಗುವಂತಹ ವ್ಯಕ್ತಿತ್ವವನ್ನು ಹೊಂದಿರುತ್ತಾನೆ ಎಂಬುದಕ್ಕೆ ಹಾಗೂ ಉತ್ತಮವಾದ ನಿರ್ಧಾರವನ್ನು ತೆಗೆದುಕೊಂಡಿರುವಂತಹ ವಿಚಾರ ತಿಳಿದುಬರುತ್ತದೆ. ಸಮಾಜಿಕ

ಬದಲಾವಣೆಯತ್ತ ಇವನ ಪಾತ್ರದಲ್ಲಿ ಬದಲಾವಣೆಯನ್ನು ಕಾಣುವುದಕ್ಕೆ ನೆರವಾಯಿತು. ಅಬ್ಬಾಸ್‌ನನ್ನು ಪರಿವರ್ತನೆಗೊಳಿಸುವಲ್ಲಿ ಪ್ರಮುಖವಾಗಿ ಇಬ್ಬರು ವ್ಯಕ್ತಿಗಳು ಮುಖ್ಯರಾದಂತವರು ಅವರೆಂದರೆ ಜಬ್ಬಾರ (ಸ್ನೇಹಿತ) ಮತ್ತು ವಸಂತಕುಮಾರಿ. ವಸಂತಕುಮಾರಿಯ ವ್ಯಕ್ತಿತ್ವ ಅವನ ಮೇಲೆ ಅಷ್ಟು ರೀತಿಯ ಪ್ರಭಾವ ಬೀರಿರಬಹುದು. ಅಂದರೆ, ಅವಳ ನಿಶ್‌ಕಲ್ಮಶ ತುಂಬಿದ ನೋಟ, ನಿಸ್ವಾರ್ಥ ಮನೋಭಾವ ಇವೆಲ್ಲವುಗಳಿಂದ ಅವಳು ಬಹಳ ಶ್ರೇಷ್ಟವಾದ ವ್ಯಕ್ತಿತ್ವವನ್ನು ಹೊಂದಲು ಸಹಾಯಕವಾಗಿದೆ. ವಸಂತಕುಮಾರಿಯು ವೃತ್ತಿಯಲ್ಲಿ ಹೀನವಾದಂತಹ ಅಥವಾ ಕನಿಷ್ಟವಾದಂತಹದ್ದನ್ನು ಮಾಡುತ್ತಿದ್ದರೂ ಸಹ ಅವಳಲ್ಲಿರುವ ಒಳ್ಳೆಯ ಗುಣವನ್ನು ಈ ಕತೆಯಲ್ಲಿ ಬಹಳ ಸೊಗಸಾಗಿ ಚಿತ್ರಿಸಿದ್ದಾರೆ. ಅವನಿಗಾಗಿ ಅವಳು ಕಾಯುತ್ತಿರುವುದು. ಮತ್ತು ಮನೆಯ ಬಾಡಿಗೆಯನ್ನು ಇವಳೇ ಕಟ್ಟುತ್ತಿರುವುದನ್ನು ಕಾಣಬಹುದಾಗಿದೆ. ಬೇರೆ ಎಲ್ಲರ ರೀತಿ ಇವಳಲ್ಲ. ಎನ್ನುವುದನ್ನು ಇವಳೇ ಇವರಳ ವ್ಯಕ್ತಿತ್ವವೇ ಬೇರೆ ರೀತಿಯಾದದ್ದು ಎನ್ನುವುದನ್ನು ಈ ಕತೆಯಲ್ಲಿ ಇವಳ ಪಾತ್ರದ ಮೂಲಕ ಚಿತ್ರಿಸ ಹೊರಟಿದ್ದಾರೆ.

"ಹೀಗೊಬ್ಬ ಮನುಷ್ಯ" :– ಈ ಕತೆಯಲ್ಲಿ ಬರುವಂತಹ ಬಹಳ ಮುಖ್ಯವಾದ ಪಾತ್ರಗಳೆಂದರೆ, ಶಿಕ್ಷಕ ಮತ್ತು ಕಳ್ಳವೇಶದ ಕಪ್ಪನೆ ವ್ಯಕ್ತಿ ಬರುತ್ತನೆ. ಇಲ್ಲಿ ಬರುವ ಎರಡು ಪಾತ್ರಗಳೂ ಸಹ ವಿರುದ್ಧ ದಿಕ್ಕಿನಲ್ಲಿ ಸಾಗುತ್ತವೆ. ತುಂಬಾ ಪ್ರಾಮಾಣಿಕತೆ, ನಿಷ್ಠಾವಂತಿಕೆ, ಶ್ರಮದಾಯಕ ಜೀವನ, ಸಮಾಜದ ಬಗ್ಗೆ ಕಾಳಜಿ ಹೊಂದಿರುವ ವ್ಯಕ್ತಿಯ ರೂಪದಲ್ಲಿ ಶಿಕ್ಷಕನು ಕಂಡು ಬಂದರೆ, ಈ ಪಾತ್ರಕ್ಕೆ ತದ್ವಿರುದ್ಧವಾಗಿ ಬರುವ ಪಾತ್ರವೇ ಕಳ್ಳನ ಪಾತ್ರ ಚಿತ್ರಣ. ನಿಷ್ಟೆ, ಪ್ರಾಮಾಣಿಕತೆ, ಸಮಾಜ ವಿರೋಧಿ ವೃತ್ತಿಯನ್ನು ಮಾಡುತ್ತಿರುತ್ತಾನೆ. ಮೋಸ, ಕೊಲೆ, ವಂಚನೆ, ಕ್ರೂರತ್ವಗುಣವನ್ನು ಇವನು ಹೊಂದಿದ್ದಾನೆ. ಇಡೀ ಒಂದು ಊರಿನ ಜನತೆಯನ್ನು ಇವನೊಬ್ಬನ ಪಾತ್ರದ ಮೂಲಕ ತಿಳಿಸ ಹೊರಟಿದ್ದಾರೆ. ಈ ವ್ಯಕ್ತಿ ಕೊನೆಯಲ್ಲಿ ಬದಲಾದವನಂತೆ ಕಂಡುಬರುತ್ತಾನೆ. ಆದರೆ, ಅದು ಶಾಶ್ವತವಾಗಿ ಬದಲಾಗಿರುವುದಿಲ್ಲ. ಮೇಲ್ನೋಟಕ್ಕೆ ಆ ಶಿಕ್ಷಕ ಕಷ್ಟದಲ್ಲಿರುವಾಗ ಸಹಾಯ ಮಾಡಿದರೂ ಸದಹ ಅದು ಹುಸಿ ಮಾನವೀಯ ಗುಣವೆಂದು, ಮತ್ತೆ ಅವನು ಇದೇ ವೃತ್ತಿಯನ್ನು ಅನುಭವಿಸುತ್ತಾನೆ. ಅಂದರೆ ಒಬ್ಬ ಉತ್ತಮ ವ್ಯಕ್ತಿ ಒಂದು ಸಾರಿ ತಾನು ಕೆಟ್ಟವನು, ಕಳ್ಳ ಎಂಬಂತಹ ಹೆಸರು ಬಂದರೆ ಮುಗಿಯಿತು. ಅವನು ಮತ್ತೆ ಒಳ್ಳೆಯ ಹೆಸರು ಮಾಡಲು ಆಗುವುದಿಲ್ಲ ಮತ್ತು ಬದಲಾಗಿ ಆ ಪರಿಸರ ವಾತಾವಣರ, ಸಂದರ್ಭಗಳು ಆ ರೀತಿ ನಮ್ಮನ್ನೇ ಹಿಡಿತದಲ್ಲಿಟ್ಟುಕೊಂಡಿರುತ್ತವೆ ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬರುವುದಿಲ್ಲ. ಎಂಬ ಗಾದೆ ಈ ಸಂದರ್ಭದಲ್ಲಿ ಸೂಕ್ತವಾದದ್ದಾಗಿದೆ.

ಶಿಕ್ಷಕನ ಪರಿಸ್ಥಿತಿಯನ್ನು ನೋಡಿ ಈ ಕಳ್ಳನಲ್ಲಿ ಅನುಕುಂಪ ಹುಟ್ಟುವುದು ಅದರಲ್ಲೂ ತುಂಬಾ ಕ್ರೂರಿಗಳಾದಂತವರಲ್ಲಿ ಎಂಬ ವಿಚಾರವು ಇಲ್ಲಿ ನಮ್ಮನ್ನು ಗಮನ ಸೆಳೆಯುತ್ತದೆ.

**ಐಷು ಕುಟ್ಟಿ :-** ಈ ಪಾತ್ರವು ಪ್ರತಿಷ್ಟೆಯನ್ನು ಕಾಪಾಡಿಕೊಳ್ಳುವಂತಹದ್ದಾಗಿ ನಮಗೆ ಕಂಡುಬರುತ್ತದೆ. ಈ ಪಾತ್ರವು ಹೆಣ್ಣಿನ ಮತ್ತೊಂದು ವಿಭಿನ್ನ ನೆಲೆಯಲ್ಲಿ ಚಿತ್ರಿಸಿದೆ. ಅಂದರೆ, ಮಹಿಳೆ ತನಗೆ ಏನೇಬೇಕದರೂ ಸಹ ಅದನ್ನು ಪ್ರತಿಭಟಿಸಿ ಹೋರಾಟ ನಡೆಸಿ ಪಡೆಯಬೇಕೆನ್ನುವುದನ್ನು ಈ ಕತೆಯು ನಿರೂಪಿಸುತ್ತಿದೆ. ಅದರಲ್ಲೂ ಈ ಐಷುವಿನ ಮನೋಭಾವ ತಾನು ಮತ್ತೊಬ್ಬರಿಗಿಂತ ಯಾವುದರಲ್ಲೂ ಕಡಿಮೆ ಇರಬಾರದು ಎನ್ನುವ ದೃಷ್ಟಿಯಲ್ಲಿ ಆಲೋಚಿಸುತ್ತಾಳೆ. ಪ್ರತಿಷ್ಟೆಗಾಗಿ ತನ್ನ ಗಂಡನ ಪರಿಸ್ಥಿತಿ ಆರ್ಥಿಕವಾಗಿ ದುರ್ಬಲಗೊಂಡಿದೆ ಎಂದು ಗೊತ್ತಿದ್ದರೂ ಸಹ ತನ್ನ ಹೆರಿಗೆಯನ್ನು ದುಬಾರಿ ಹಣಕೊಟ್ಟು ಆಸ್ಪತ್ರೆಯಲ್ಲೇ ಮಾಡಿಸು ಇಲ್ಲದಿದ್ದರೆ ಸಾಯುತ್ತೇನೆ ಎನ್ನುವಂತಹ ಹೆದರಿಕೆಯನ್ನು ಇವಳು ಮುಂದಿಟ್ಟಳು. ಇವಳದು ತೋರ್ಪಡಿಕೆಯ ಜೀವನದ ರೀತಿಯಲ್ಲಿ ಈ ಕತೆಯಲ್ಲಿ ಪ್ರತಿಬಿಂಬಿತವಾಗಿದೆ ಇವಳ ಪಾತ್ರ.

ಈ ಕತೆಯಲ್ಲಿ ಬರುವ ಐಷುವಿನ ಪಾತ್ರದ ವ್ಯಕ್ತಿತ್ವ, ನಡವಳಿಕೆಯನ್ನು ಗಮನಿಸಿದರೆ, ಹೆಣ್ಣಿನ ಮೇಲೆ ಇರುವಂತಹ ಸಹಾನಾಮೂರ್ತಿ, ತ್ಯಾಗಗುಣದವಳು, ಇತ್ಯಾದಿ ಗುಣಗಳಿಗೆಲ್ಲಾ ಇವಳು ಕೊಂಚ ವಿಭಿನ್ನವಾದ ನೆಲೆಯಲ್ಲಿ ಕಂಡುಬರುತ್ತಾಳೆ.

ಇವಳ ತಾಯಿಯ ಪಾತ್ರದಲ್ಲಿ ತನ್ನ ತಾಳಿಯನ್ನು ಮಾರಿಯಾದರೂ ಮಗಳಿಗೆ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಬೇಕೆಂದು ಹೇಳುತ್ತಾಳೆ. ಪ್ರತಿಷ್ಟೆ, ಗೌರವ, ಹಟದ ಮುಂದೆ ಸಾಂಪ್ರದಾಯಿಕತೆ, ನಮ್ಮ ಸಾಂಸ್ಕೃತಿಕ ನಂಬಿಕೆ, ಮೌಲ್ಯಗಳಿಗೆ ಇವರು ಬೆಲೆಕೊಡದೆ, ಬದುಕನ್ನು ಕಟ್ಟಿಕೊಂಡಿ ಇವರಿಬ್ಬರು ಈ ಕತೆಯಲ್ಲಿನ ಪಾತ್ರದಲ್ಲಿ ಕಂಡುಬರುತ್ತಾರೆ.

**"ಲೋಕ ಪ್ರಸಿದ್ಧ ಮೂಗು:-** ಇದರಲ್ಲಿ ಕಾಮ್ರೆಡ್ ಎನ್ನುವ ವ್ಯಕ್ತಿಯ ಪಾತ್ರ ಚಿತ್ರಣದ ಮೂಲಕ ಇವನ ವ್ಯಕ್ತಿತ್ವವನ್ನು ನಿರೂಪಿಸಿದ್ದಾರೆ.

ಇವನು ಒಬ್ಬ ಅಡಿಗೆಯವನು ಅಥವ ಅಡಿಗೆ ಮನೆಯ ಕೆಲಸದ ಆಳು ಅವನೇನು ಅಂಥ ಚುರುಕು ಬುದ್ದಿಯವನಲ್ಲಾ ಬರೆಯುವುದಾಗಲೀ, ಓದುವುದಾಗಲೀ ಅವನಿಗೆ ಗೊತ್ತಿಲ್ಲ.. ಅವನ ಪ್ರಪಂಚವೇನಿದ್ದರೂ ಆ ಅಡಿಗೆ ಮನೆಗೆ ಸೀಮಿತವಾಗಿತ್ತು. ಅದು ಬಿಟ್ಟು ಆಚೆಯ ಪ್ರಪಂಚಕ್ಕಾಗಲೀ ಅಲ್ಲೀನ ಯಾವುದೇ ಘಟನೆಗಾಗಲೀ ಅವನು ಸದಾ ಸಂಪೂರ್ಣ ತಾಜ್ಯ. ಅವನು ಅವುಗಳತ್ತ ನಿಗಯಿಡುವ ಜರೂರತ್ತಾದರೂ ಏನಿತ್ತು? ಹಸಿವಾದಾಗ ಹೊಟ್ಟೆ ತುಂಬ ಊಟ ಬೇಕಿನಿಸಿದಾಗ ಚಿಟಿಕಿ ನಶ್ಯಾ, ನಿದ್ರೆ ಮತ್ತೆ ಕೆಲಸ ಅವನ ಪ್ರತಿದಿನದ ಬದುಕು ಇವುಗಳ ಸುತ್ತಾ ಸವಿಯುತ್ತಿತ್ತು.

ಅವನಿಗೆ ವರ್ಷದ, ತಿಂಗಳ ಹೆಸರುಗಳು ತಿಳಿಯುತ್ತಿರಲಿಲ್ಲ ಅವನ ಸಂಬಳ ದಿನ ಬಂದಾಗ ಅವನ ಅವ್ವಾ ಬಂದು ಅದನ್ನು ತೆಗೆದುಕೊಂಡು ಹೋಗುತ್ತಿದ್ದಳು. ಒಂದು ವೇಳೆ ಅವನಿಗೆ ನಶ್ಯಾ ಬೇಕೆಂದರೂ ಅವನ ಮುದಿ ಅವ್ವ ತರುತ್ತಿದ್ದಳು ಹೀಗೆ ಅವನ 24ವರ್ಷದ ಬದು ಕೆಲವು ಸಂಪೂರ್ಣ ಸಂತೃಪ್ತಿಯಾಗಿತ್ತು. ಮುಂದೆ ಇವನ ಜೀವನ ಅನೇಕ ಸಂಕಷ್ಟಗಳಿಗೆ ಸಿಲುಕಿತು ಸಮಸ್ಯೆಗಳ ಸುಳಿಯಲ್ಲಿ ನಲುಗಬೇಕಾಯಿತು. ಆದರೆ ಸಮಸ್ಯೆಯನ್ನೆ ಜನ ಪ್ರಸಿದ್ಧ ರೀತಿಯಲ್ಲಿ ಇವನನ್ನು ನೋಡ ತೊಡಗಿದರು ಇವನು ಕೂಡ ದೇಹದ ವಿಕಲತೆಯನ್ನು ಸಮಸ್ಯೆಯೆಂದು ಪರಿಭಾವಿಸದೇ ಅದನ್ನೇ ಅವನು ಕೂಡ ಬಂಡವಾಳವನ್ನಾಗಿ ಮಾಡಿಕೊಂಡನು ಅಂದರೆ ಇವನ ಪಾತ್ರದ ಮೂಲಕ ತಿಳಿದುಬರುವ ವಿಷಯವೆಂದರೆ ಕಷ್ಟ ಸಮಸ್ಯೆಯನ್ನು ಹೊಡೆದು ಬಂಡವಾಳವನ್ನಾಗಿ ಮಾಡಿಕೊಳ್ಳಬೇಕು ಇವನ ಪಾತ್ರಕ್ಕೆ ಲೇಖಕರು ಮರುಜೀವದ ಸೃಷ್ಟಿಯನ್ನು ಮಾಡುತ್ತಾರೆ. ಕೆಲಸ ಕಳೆದುಕೊಂಡು ನಿರ್ಗತಿಕನಾಗಿದ್ದ ಇವನಿಗೆ ಜೀವನಕ್ಕೆ ಬೇರೆ ದಾರಿಯೇ ಕಾಣದಂತೆ ಆಯಿತು ಯಾವ ಕಾರಣಕ್ಕಾಗಿ ಕೆಲಸ ಕಳೆದುಕೊಂಡನೊ ಅದೇ ವಿಷಯದಲ್ಲಿ ಜೀವನಕ್ಕೆ ಆಶ್ರಯ ನೆರವು ಸಿಗುವಂತೆ ಆಯಿತು.

ಯಾವುದೇ ಒಂದು ಕೆಲಸವಾಗದಿದ್ದಾಗ ಅನೇಕ ಅಡಚಣೆಗಳು ಕಂಡುಬರುತ್ತದೆ ಸಮಸ್ಯೆಯಲ್ಲಿಯೂ ಒಳಿತಿದೆ ಎನ್ನುವುದನ್ನು ಇವರ ಪಾತ್ರಗಳ ಮೂಲಕ ನಾನು ಪರಶೀಲಿಸಿದ್ದೇನೆ.

**ಬಂಗಾರಿ** :- ಈ ಕತೆಯಲ್ಲಿ ಮೊದಲು ಬಂಗಾರಿಂಯು ಯಾವ ರೀತಿ ಇದ್ದಾಳೆ? ಗುಣ, ಸ್ವಭಾವಗಳಿಗೆ ಸಂಬಂಧಿಸಿದಂತ ವಿಚಾರವನ್ನು ಕಾಣಬಹುದಾಗಿದೆ ಇವಳು ಕೆಲಸ ಮಾಡುವ ಮನೆಯವರು ಇವಳ ಬಣ್ಣ ಕಪ್ಪಾಗಿದೆಯೆಂದು ಕೆಲಸದಿಂದ ತೆಗೆದುಬಿಡುತ್ತಾರೆ. ನಂತರದ ಜೀವನ ನಡೆಸಲು ತುಂಬಾ ಕಷ್ಟ ಪಡಬೇಕಾಗುತ್ತದೆ. ಮನುಷ್ಯ ತನ್ನ ನೆಲೆಯನ್ನು ಕಳೆದುಕೊಂಡು ಮನುಷ್ಯತ್ವವನ್ನು ಬಣ್ಣದಲ್ಲಿ ವ್ಯತ್ಯಾಸ ಇರುವುದನ್ನು ಕಾಣುತ್ತೇವೆ. ಅಂದರೆ ಸಮಾಜದಲ್ಲಿ ಕೆಳಸ್ಥರದಲ್ಲಿರುವುದನ್ನು ಯಾವ ರೀತಿ ನಡೆಸಿಕೊಳ್ಳುತ್ತಾರೆ ಎನ್ನುವ ಪರಿಸ್ಥಿತಿ ಬಹಳ ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿದೆ.

ಅವಳ ಬಣ್ಣವನ್ನು ನೋಡಿ ಇಡೀ ಜಗತ್ತೇ ಎದುರಾದರೂ ಅದನ್ನು ಎದುರಿಸುವಂತಹ ಮನಸ್ಥಿತಿಯನ್ನು ಈ ಬಂಗಾರಿಎಂಬ ಪಾತ್ರದ ಮೂಲಕ ಸೃಷ್ಟಿಸಲಾಗಿದೆ. ಹಣ ಸಂಪತ್ತಿನ ಮುಂದೆ ಉತ್ತಮ ಗುಣವಾಗಲೀ ಪ್ರಾಮುಖ್ಯತೆಯನ್ನು ಪಡೆಯುತ್ತದೆ.

ಈ ಸಮಾಜದಲ್ಲಿ ಸ್ತ್ರೀಯೊಬ್ಬಳು ಅನುಭವಿಸುತ್ತಿರುವಂತಹ ನೋವು ಅವಮಾನದ ಪ್ರತಿನಿಧಿಯಾಗಿ ಬಂಗಾರಿಯ ಪಾತ್ರವನ್ನು ನೀಡಿದ್ದಾರೆ. ಇದರಿಂದ ಸಮಾಜದ ಬಗ್ಗೆ ಒಳಿತನ್ನು ಬಯಸುವ ಮನಸ್ಸುಗಳಿಗೆ ಬಂಗಾರಿಯ ಆದರ್ಶವನ್ನು ಗಮನಿಸಬಹುದಾಗಿದೆ. ಸಮಾಜಮುಖಿಯಾದ ಚಿಂತನೆ ಈ ಕಥೆಯ ಪಾತ್ರಕ್ಕಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಬಂಗಾರಿ ಎಂಬ ಪಾತ್ರಕ್ಕೆ ನೀಡಿರುವಂತಹ ಹೆಸರಿಗೆ ಶಿರ್ಷಿಕೆಗೆ ಸರಿಹೊಂದುವಂತೆ ಇವಳ ಹೆಸರು ಮಾತ್ರ ಬಂಗಾರಿಯಲ್ಲ ಇವಳ ವ್ಯಕ್ತಿತ್ವವೇ ಬಂಗಾರವಾದಂತಹುದು ಎಂಬ ತೀರ್ಮಾನಕ್ಕೆ ಬರಬಹುದು. ಒಬ್ಬ ನಿರಾಶ್ರಿತ ಯುವಕನಿಗೆ ಮನೆಯಲ್ಲಿ ಸ್ಥಳವನ್ನು ಕೊಡುತ್ತಾಳೆ. ಅಂತಹ ಸಂದರ್ಭದಲ್ಲಿ ಅವಳ ಪರೋಪಕಾರ ಮನೋಭಾವವನ್ನು ಮೆಚ್ಚುವಂತಾಗಿದೆ.

**ನೀಲಿಕಂದೀಲು** :– ಈ ಕಥೆಯಲ್ಲಿ ಬರುವಂತಹ ಪಾತ್ರಗಳೆಂದರೆ ಬ್ಯಾಂಕ್ ಉದ್ಯಮಿ ಮತ್ತು ಭಾರ್ಗವಿ ಎಂಬ ಆತ್ಮಗಳನ್ನು ಕಾಣಬಹುದು ಬ್ಯಾಂಕ್ ಉದ್ಯಮಿಯು ಭಾರ್ಗವಿ ಎನ್ನುವ ಹೆಣ್ಣಿನ ಆತ್ಮದ ಜೊತೆಗೆ ಒಂದೇ ಮನೆಯಲ್ಲಿ ಇಬ್ಬರೂ ಭಾಗವನ್ನು ಮಾಡಿಕೊಂಡು ಧೈರ್ಯವನ್ನು ಪ್ರದರ್ಶಿಸುತ್ತಾನೆ. ಸಮಾಜದಲ್ಲಿರುವಂತಹ ಭಾವನೆ ಭಯವನ್ನು ಇವನ ಪಾತ್ರದ ಮೂಲಕ ಒಡೆದು ಕಟ್ಟುವುದನ್ನು ಕಾಣಬಹುದಾಗಿದೆ. ಈ ನಿರೂಪಕನಿದ್ದ ಮನೆಯಲ್ಲಿ ಮನೆಯ ಬಳಿ ಯಾರು ಸುಳಿಯುತ್ತಿರಲಿಲ್ಲ ಏಕೆಂದರೆ ಆ ಮನೆಯಲ್ಲಿ ಹೆಣ್ಣು ಆತ್ಮ ಇದೇ ಎನ್ನುವಂತಹ ಕಲ್ಪನೆಯನ್ನು ಈ ಕಥೆಯಲ್ಲಿ ಬಳಸಿಕೊಂಡಿದ್ದಾರೆ. ಜೀವ ಪರವಾದ ಚಿಂತನೆಯ ಪರಿಕಲ್ಪನೆ ಮತ್ತು ಆತ್ಮದ ಹಿನ್ನಲೆಯಲ್ಲಿ ಪಾತ್ರವನ್ನು ವಿಶ್ಲೇಷಿಸಲಾಗಿದೆ.

ಒಬ್ಬ ಮನುಷ್ಯನಿಗೆ ವಾಸಿಸುವುದಕ್ಕೆ ಮನೆ ಎಷ್ಟು ಮುಖ್ಯವೋ ಅದೇ ರೀತಿ ಈ ಭಾರ್ಗವಿಯ ಆತ್ಮಕ್ಕೂ ಕೂಡ ಅಷ್ಟೇ ಅಗತ್ಯವಿದೆ ಎನ್ನುವ ಭಾವವು ಈ ಕತೆಯಲ್ಲಿ ಬರುವ ಸಂದರ್ಭ ಸನ್ನಿವೇಶಗಳ ಮೂಲಕ ಪಾತ್ರ ಚಿತ್ರಿತಗೊಳ್ಳುತ್ತಾ ಹೋಗುತ್ತದೆ.

ಆತ್ಮಕ್ಕು ಕೂಡ ಒಂದು ವ್ಯಕ್ತಿತ್ವವನ್ನು ರೂಪಿಸುವ ಅಥವಾ ನ್ಯಾಯವನ್ನು ನೀಡುವುದರ ಮೂಲಕ ಈ ಪಾತ್ರಕ್ಕೆ ಒಂದು ಮಹತ್ವವನ್ನು ಈ ಕಥೆಯಲ್ಲಿ ತಂದಿದ್ದಾರೆ.

**ಪ್ರೇಮ ಪತ್ರ** :– ಎಂಬ ಕಥೆಯಲ್ಲಿ ಪ್ರಮುಖ ಪಾತ್ರವೆಂದರೆ ಕೇಶವ್ ನಾಯರ್ ಮತ್ತು ಸರುಮ ಎಂಬ ಪಾತ್ರಗಳು ಕಂಡುಬರುತ್ತವೆ. ಸರುಮಳ ಪಾತ್ರದಲ್ಲಿ ಸಾಮಾಜಿಕ ಎಚ್ಚರಿಕೆ ಇರುವ ಸ್ಥಿತಿಯಲ್ಲಿ ಇವಳು ಕಂಡುಬರುತ್ತಾಳೆ. ಇವಳು ಸಮಾಜದ ಹಾಗೂ ಕುಟುಂಬದ ನಿಯಮವನ್ನು ಮೀರುವಂತಹ ಸ್ಥಿತಿಯನ್ನು ಕಾಣಬಹುದಾಗಿದೆ. ಮನೆಯ ಪರಿಸ್ಥಿತಿಗೆ ಹೊಂದಿಕೊಳ್ಳಲಾಗದೇ ತಾನು ಸ್ವಾವಲಂಬಿಯಾಗಿ ದುಡಿಯಬೇಕು ಆಗ ಮಾತ್ರ ನನಗೆ ಒಂದು ಒಳ್ಳೆಯ ಬದುಕು ಮತ್ತು ಜೀವನ ಸಿಗೋದಕ್ಕೆ ಸಾಧ್ಯವಾಗುತ್ತದೆಎಂಬಂತಹ ಭಾವನೆಯನ್ನು ಇಟ್ಟುಕೊಂಡಿದ್ದಳು.

ಬಿ.ಎ.ಪದವಿಯನ್ನು ಪಡೆದಿದ್ದರೂ ಸಹ ಒಳ್ಳೆ ಕೆಲಸಕ್ಕಾಗಿ ಹುಡುಕುವುದರಲ್ಲಿ ಕಂಗಾಲಾಗಿದ್ದಳು ಆಗ ಕೇಶವನ ಪರಿಚಯ ಅವನಿಂದ ಕೆಲಸ ಪಡೆಯುವುದಕ್ಕೆ ಯತ್ನಿಸುತ್ತಾಳೆ ಮತ್ತು ವರದಕ್ಷಿಣೆ ಕೊಟ್ಟು ಮದುವೆ ಮಾಡುವ ಪರಿಸ್ಥಿತಿ ಬಂದಾಗಲು ಸಹ ಅನೇಕ ರೀತಿಯಾಗಿ ಅವಮಾನಕ್ಕೆ

ಒಳಗಾಗುತ್ತಾಳೆ ವರದಕ್ಷಿಣೆ ಕೊಡುವ ಶಕ್ತಿ ಇವರಲ್ಲಿ ಇರಲಿಲ್ಲ. ಆರ್ಥಿಕವಾಗಿ ಬಹಳ ಹಿಂದಿದ್ದರೂ ತಾನು ಮನೆಗೆ ತಂದೆಗೆ ತಾಯಿಗೆ ಹೊರೆಯೆಂಬುದನ್ನು ಬಹಳ ಗಂಭೀರವಾಗಿ ತೆಗೆದುಕೊಂಡಿದ್ದಳು ಕೊನೆಯಲ್ಲಿ ಇವಳು ಹಿಡಿಯುವ ಮಾರ್ಗವೆಂದರೆ ಇದೇ ಸಂದರ್ಭಕ್ಕೆ ಇವಳನ್ನು ಪ್ರೀತಿಸುವುದಾಗಿ ಹೇಳಿದ ಕೇಶವ್ ಪ್ರೀತಿ ಎಂಬ ಕೆಲಸಕ್ಕೆ ನನಗೆ ನೀನು ಸಂಬಳ ಕೊಡಬೇಕಾಗುತ್ತದೆ ಎಂದು ಹೇಳಿದಳು ಅಂದರೆ ಕೆಲಸ ದುಡಿಮೆ ಹಣಗಳಿಕೆ ಎನ್ನುವಂತದ್ದು ಇವಳ ಮನಸ್ಸಿನಲ್ಲಿ ಆಳವಾಗಿ ಬೇರೂರಿತ್ತು ಎಂಬುದು ಈ ಎಲ್ಲಾ ವಿಚಾರಗಳಿಂದ ತಿಳಿದುಬರುತ್ತದೆ.

ಕೇಶವ್‌ನನ್ನು ಸರಿದಾರಿಗೆ ತರುವಂತಹ ಕೆಲಸವನ್ನು, ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಾಳೆ. ಮತ್ತು ತಮ್ಮ ವಿವಾಹದ ಜೀವನಕ್ಕೆ ಎದುರಾಗುವಂತಹ ತೊಂದರೆಯನ್ನು ಕುರಿತು ಧರ್ಮ, ಜಾತಿಯ ಹಿನ್ನೆಲೆಯಲ್ಲಿ ಮತ್ತು ಸಾಂಪ್ರಾದಾಯಿಕ ಹಿನ್ನೆಲೆಯಿಂದಲೂ ಇವಳ ವ್ಯಕ್ತಿತ್ವ ವಿಭಿನ್ನವಾದ ದೃಷ್ಟಿಕೋನದಿಂದ ಕಂಡುಬರುತ್ತದೆ. ಜೀವನದ ಬಗ್ಗೆ ಇವಳಿಗೆ ಇರುವ ಕಾಳಜಿ ಜವಾಬ್ದಾರಿಯನ್ನು ಹಾಗು ಬದುಕನ್ನು ದೂರ ದೃಷ್ಟಿಯಿಂದ ನೋಡುವ ಕ್ರಮ ವಿಶಿಷ್ಟವಾಗಿ ಇವಳ ಪಾತ್ರದಲ್ಲಿ ಹಿಡಿದಿಟ್ಟಿದ್ದಾರೆ.

**ಹೂಬಾಳೆ :–** ಈ ಕಥೆಯಲ್ಲಿ ಬರುವ ಪಾತ್ರಚಿತ್ರಣಗಳೆಂದರೆ ಅಬ್ದುಲ್ ಖಾದರ್ ಇವನು ತಾನು ಪ್ರೀತಿಸಿದ ಹುಡುಗಿಯನ್ನು ಪಡೆಯುವಲ್ಲಿ ಮಾಡುವಂತಹ ಪ್ರಯತ್ನಗಳು ಹಾಗು ಜಮೀಲಾಳು ಆಳು ಓದಿರುವಂತಹ ಹುಡುಗಿ ಮತ್ತು ತಾನು ಸುಂದರವಾಗಿದ್ದೇನೆ ಎಂದು ಜಂಬ ಪಡುತ್ತಿದ್ದಳು ಇವಳಿಗೆ ಸರಿಯಾಗಿ ಬುದ್ದಿ ಕಲಿಸುವಲ್ಲಿ ಇವನ ಪ್ರಯತ್ನದ ಮಹತ್ವ ಪೂರ್ಣವಾದದ್ದು, ನದಿಯ ಸುಳಿಗೆ ಸಿಕ್ಕಿ ಪಾರಾಗಿ ಬರುವುದು ಶ್ರೀಮಂತ ಮನೆಯ ಹೆಣ್ಣನ್ನು ವಿವಾಹವಾಗುವಲ್ಲಿ ಇವನ ಪ್ರಯತ್ನ ಫಲಕಾರ್ಯ ಆಗಿದೆ. ಅಂದರೆ ಸಾಮಾಜಿಕ ಬದಲಾವಣೆಯನ್ನು ಇವರ ಪಾತ್ರದಲ್ಲಿ ಕಂಡುಬರುತ್ತದೆ. ವಿವಾಹವಾದ ಬಳಿಕವೂ ಜಮೀಲಾಳು ತನ್ನ ಬೇಜವಾಬ್ದಾರಿ ತನದಿಂದ ವರ್ತಿಸುವುದು ಗಂಡ ತಾನು ಹೇಳಿದ ಹೂಬಾಳೆಯನ್ನು ತರದಾಗ ಕೋಪಿಸಿಕೊಳ್ಳುವುದು ಅಬ್ದುಲ್ ಖಾದರ್ ಪರಿಪರಿಯಾಗಿ ಬೇಡಿದರೂ ಮತ್ತು ನಡೆದ ಭಯಂಕರ ದುರಂತವನ್ನು ಹೆಂಡತಿಗೆ ವಿವರಿಸಿದರೂ ಸಹ ಹಟದಿಂದ ಗಂಡನ ವಿಶ್ವಾಸಕ್ಕೆ ದೂರವಾಗುತ್ತಾಳೆ. ಇದರಿಂದ ಅಬ್ದುಲ್ ಖಾದರ್ ತುಂಬ ಕಟುವಾಗಿ ಇವಳನ್ನು ನಿಯಂತ್ರಿಸಬೇಕಾಗಿ ಬರುವಂತಹ ಸನ್ನಿವೇಶಗಳು ಈ ಕಥೆಯ ಪಾತ್ರಗಳ ಮೂಲಕ ಕಂಡುಬರುತ್ತದೆ.

ಜಮೀಲಾಳು ಸಂಪೂರ್ಣ ಸ್ವಾತಂತ್ರವನ್ನು ಪಡೆದಿದ್ದಂತಹ ಹೆಣ್ಣಾಗಿ ನಮಗೆ ಕಂಡುಬರುತ್ತಾಳೆ. ಈ ಸ್ವಾತಂತ್ರವನ್ನು ಬಳಸಿಕೊಳ್ಳುವಲ್ಲಿ ಎಲ್ಲೋ ಒಂದು ಕಡೆಯಲ್ಲಿ ವಿಫಲಳಾಗುತ್ತಾಳೆ ಎನ್ನುವುದು ಕಥೆಯ ಪಾತ್ರಗಳ ಮೂಲಕ ತಿಳಿದು ಬರುತ್ತದೆ. ಸ್ವಲ್ಪ ಬೇಜಾಬ್ದಾರಿತನದ ತುಂಟತನದ ವ್ಯಕ್ತಿತ್ವ ಇವಳದ್ದಾಗಿದೆ. ಆದ್ದರಿಂದ ಜೀವನದ ಬಗ್ಗೆ ಹಾಗು ಕೌಟುಂಬಿಕ ಕಾಳಜಿಯ ಬಗ್ಗೆ ಎಚ್ಚರ ಅಗತ್ಯವಿತ್ತು.

ತನ್ನ ಗಂಡನಿಲ್ಲದಿರುವಾಗ ಮನೆಯನ್ನು ಯಾವ ರೀತಿ ರಕ್ಷಿಸಬೇಕೆಂಬ ಒಂದು ನೈಪುಣ್ಯತೆಯು ಪಾತ್ರ ಚಿತ್ರಣದಲ್ಲಿ ಮೂಡಿಬಂದಿದೆ. ಬಾಗಿಲಿಗೆ ಊಟದ ಟೇಬಲನ್ನು ಸರಿಸಿ ಭದ್ರವಾಗಿ ಚಿಲಕವನ್ನು ಹಾಕಿದ್ದಳು. ಒಂದು ಕಡೆ ಎಚ್ಚರವಾದ ಪ್ರಜ್ಞೆ ಇರುವುದು ಕಂಡುಬಂದರೂ, ಮತ್ತೊಂದು ಕಡೆ ಬಾಗಿಲು ತೆರದೆ ಇತ್ತು, ಅಂದರೆ ಅಪ್ರಜ್ಞಾವ್ಯವಸ್ಥೆಸ್ಥಿತಿಯಲ್ಲಿದ್ದಳು. ಈ ವಿಚಾರ ಅವಳಲ್ಲಿ ಇನ್ನು ಕೌಟುಂಬಿಕ ನಿರ್ವಹಣೆಯ ಕೌಶಲ್ಯ ಕಡಿಮೆ ಇದೆ ಎನ್ನುವುದು ಅವಳ ಪಾತ್ರ ಚಿತ್ರಣದ ಮೂಲಕ ತಿಳಿದು ಬರುವುದನ್ನು ನನ್ನ ಅಧ್ಯಯನದ ಮೂಲಕ ವಿವರಿಸಿದ್ದೇನೆ.

# ಅಧ್ಯಾಯ 6

## ವೈಕಂ ಮಹಮ್ಮದ್ ಬಷೀರ್‌ರ ಕತೆಗಳಲ್ಲಿ ಬಳಕೆಯಾಗಿರುವ ವಸ್ತು, ಭಾಷೆ, ತಂತ್ರ

**ಭಾಷೆ:**

ವೈಕಂ ರವರ ಬರಹವು ಗ್ರಾಂಥಿಕ ಭಾಷೆಯನ್ನು ಕೈ ಬಿಟ್ಟು, ಆಡುಭಾಷೆಯನ್ನೇ ಸಾಹಿತ್ಯದ ಭಾಷೆಯಾಗಿ ಬಳಸಿದರು ಆಡುಮಾತನ್ನೇ ಸಾಹಿತ್ಯದ ಭಾಷೆಯಾಗಿ ಬಳಸಿದ ಶ್ರೇಯಸ್ಸು ಅವರದ್ದಾಗಿದೆ. ಜನರಿಗೆ ಓದಿದ ತಕ್ಷಣ ಅರ್ಥವಾಗುವಂತಹ, ಹೆಚ್ಚಿನ ಓದುಗರನ್ನು ಪ್ರಭಾವಿಸುವ ಭಾಷೆಯಾಗಿ ಇವರ ಒಟ್ಟಾರೆ ಸಾಹಿತ್ಯವು ಕಂಡುಬರುತ್ತದೆ. ಬದುಕಿನ ಚೆಲುವನ್ನು ಅದರ ಕುರಿತು ಪ್ರೀತಿಯನ್ನು ತಮಾಷೆಯಾಗಿ ಹೇಳುತ್ತಲೇ ಅದರ ದರ್ಶನ ಮಾಡಿಸುವುದು ವೈಕಂ ಅವರ ಬರವಣಿಗೆಯಲ್ಲಿ ಕಂಡು ಬರುತ್ತದೆ. *1

ಬಷೀರ್ ರವರು ದುರಂತ ಪರಿಕಲ್ಪನೆಯನ್ನು ಬಿಟ್ಟು ವಿಡಂಬನೆ ಕ್ಷೇತ್ರಕ್ಕಿಳಿದಾಗ ಇವರ ಕತೆಗಳಿಗೆ ಮಲಯಾಳಂ ಸಾಹಿತ್ಯ ಲೋಕದಲ್ಲಿ ಮೊದಲ ದರ್ಜೆಗೆ ಏರಲ್ಪಟ್ಟವರು ಇವರು ತಮ್ಮ ಕಥೆಗಳ ಮೂಲಕ ಜಗತ್ತನ್ನು ಚಿಂತನೆಗೊಳಿಸಿದರು ಇವರ ಮೊನಚು ವಿಡಂಬನೆಯ ಭಾಷೆಯಲ್ಲಿ ಸಾಹಿತ್ಯ ರಚಿಸಿದ್ದಾರೆ .*2

ಪುಸ್ತಕಗಳನ್ನು ಕೊಂಡು ಓದುವವರ ಬಗ್ಗೆ ಅವರಿಗೆ ವಿಷಾಧವಿತ್ತು. ಜನರು ಸಿನಿಮಾಗಳಿಗೆ, ಸೀಗರೇಟ್‌ಗಳಿಗೆ, ನಾಟಕಗಳಿಗೆ, ನೀರಿನಂತೆ ಹಣ ಖರ್ಚು ಮಾಡುತ್ತಾರೆ. ಆದರೆ ಅದು ಓದಿನ ವಿಷಯಕ್ಕೆ ಬಂದಾಗ ಮಾತ್ರ ಓದೂ ಕೂಡಾ ಮನರಂಜನೆಯ ಒಂದು ರೂಪವಾಗಿದ್ದಾಗ್ಯೂ, ಅದೇ ಜನ ಪುಸ್ತಕಗಳು ಪುಕ್ಕಟೆಯಾಗಿ ಸಿಗಬೇಕು ಅಂತ ಬಯಸುತ್ತಾರೆ .*3

ಈ ಸಾಹಿತ್ಯದ ಕ್ಷೇತ್ರದಲ್ಲಿ ದಿಗ್ಗಜರೂ, ಬಲು ದೊಡ್ಡವರೂ ಆದ ವಿಮರ್ಶಕರು ಒಮ್ಮೆ ಬಷೀರ್‌ರನ್ನು ಕೇಳಿದರು, ನಿಮ್ಮ ಬರವಣಿಗೆಯ ಹಿಂದಿರುವ ಪ್ರೇರಣೆಯೇನು?

ಆಗ ಬಷೀರ್ ಹೇಳಿದರು "ನಮ್ಮ ಮನೆಯ ಅಂಗಳದಲ್ಲಿ ಬಾಳೆಯ ತೋಟವಿತ್ತು ಬಾಳೆಗಿಡದ ಒಣಗಿದ ತೊಗಟೆಗಳೆಲ್ಲವನ್ನೂ ಕಿತ್ತು ತೆಗೆದು, ನಂತರ ಉಗುರಿನಿಂದ ಬಾಳೆಯ ಹಸಿರುನಾರನ್ನು ಉದ್ದಕ್ಕೆ ಸೀಳಿ, ಎರಡೂ ತುದಿಯಲ್ಲಿ ತೆಂಗಿನ ಗರಿಯ ಕಡ್ಡಿಗಳನ್ನು ನಿಲ್ಲಿಸಿ, ಇನ್ನೊಂದು ನಾರನ್ನು ಅದರಡಿಗೆ ಸಿಕ್ಕಿಸಿ, ಆ ಕಡೆ ಈ ಕಡೆ ಎಳೆದರೆ, ವೀಣೆಯ ಹಾಗೆ ಸಂಗೀತ ಬರುತ್ತಿತ್ತು. ಅದು ಮಹಾ ಸಂಗೀತ ಅದನ್ನು ಕೇಳುವ ಅಭ್ಯಾಸವಿತ್ತು. ಅದು ನನ್ನ ಬರಹದ ಪ್ರೇರಣೆ!" ಎಂದು ಉತ್ತರಿಸಿದರು.ಇವರ ಬರಹದಲ್ಲಿ ಸರಳ ಉಪಮೆಗಳಿಂದ, ಸರಳ ಮಾತುಗಳಲ್ಲಿ ಅಭ್ಯಾಸಗೊಂಡಿದೆ. ಇವರ ಬರಹದಿಂದ ಮಲೆಯಾಳಂ ಸಾಹಿತ್ಯವನ್ನು ರಾಷ್ಟ್ರ ಮಟ್ಟಕ್ಕೆ ತಂದಂತಹ ಕೀರ್ತಿ ಇವರಿಗೆ ಸಲ್ಲುತ್ತದೆ.

ಆಗ ಬಷೀರ್ ಹೇಳಿದರು "ನಮ್ಮ ಮನೆಯ ಅಂಗಳದಲ್ಲಿ ಬಾಳೆಯ ತೋಟವಿತ್ತು ಬಾಳೆಗಿಡದ ಒಣಗಿದ ತೊಗಟೆಗಳೆಲ್ಲವನ್ನೂ ಕಿತ್ತು ತೆಗೆದು, ನಂತರ ಉಗುರಿನಿಂದ ಬಾಳೆಯ ಹಸಿರುನಾರನ್ನು ಉದ್ದಕ್ಕೆ ಸೀಳಿ, ಎರಡೂ ತುದಿಯಲ್ಲಿ ತೆಂಗಿನ ಗರಿಯ ಕಡ್ಡಿಗಳನ್ನು ನಿಲ್ಲಿಸಿ, ಇನ್ನೊಂದು ನಾರನ್ನು ಅದರಡಿಗೆ ಸಿಕ್ಕಿಸಿ, ಆ ಕಡೆ ಈ ಕಡೆ. ಎಳೆದರೆ, ವೀಣೆಯ ಹಾಗೆ ಸಂಗೀತ ಬರುತ್ತಿತ್ತು. ಅದು ಮಹಾ ಸಂಗೀತ ಅದನ್ನು ಕೇಳುವ ಅಭ್ಯಾಸವಿತ್ತು. ಅದು ನನ್ನ ಬರಹದ ಪ್ರೇರಣೆ!" ಎಂದು ಉತ್ತರಿಸಿದರು.ಇವರ ಬರಹದಲ್ಲಿ ಸರಳ ಉಪಮೆಗಳಿಂದ, ಸರಳ ಮಾತುಗಳಲ್ಲಿ ಅಬ್ಯಾಸಗೊಂಡಿದೆ. ಇವರ ಬರಹದಿಂದ ಮಲೆಯಾಳಂ ಸಾಹಿತ್ಯವನ್ನು ರಾಷ್ಟ್ರ ಮಟ್ಟಕ್ಕೆ ತಂದಂತಹ ಕೀರ್ತಿ ಇವರಿಗೆ ಸಲ್ಲುತ್ತದೆ.

ಆಗ ಬಷೀರ್ ಹೇಳಿದರು "ನಮ್ಮ ಮನೆಯ ಅಂಗಳದಲ್ಲಿ ಬಾಳೆಯ ತೋಟವಿತ್ತು ಬಾಳೆಗಿಡದ ಒಣಗಿದ ತೊಗಟೆಗಳೆಲ್ಲವನ್ನೂ ಕಿತ್ತು ತೆಗೆದು, ನಂತರ ಉಗುರಿನಿಂದ ಬಾಳೆಯ ಹಸಿರುನಾರನ್ನು ಉದ್ದಕ್ಕೆ ಸೀಳಿ, ಎರಡೂ ತುದಿಯಲ್ಲಿ ತೆಂಗಿನ ಗರಿಯ ಕಡ್ಡಿಗಳನ್ನು ನಿಲ್ಲಿಸಿ, ಇನ್ನೊಂದು ನಾರನ್ನು ಅದರಡಿಗೆ ಸಿಕ್ಕಿಸಿ, ಆ ಕಡೆ ಈ ಕಡೆ ಎಳೆದರೆ, ವೀಣೆಯ ಹಾಗೆ ಸಂಗೀತ ಬರುತ್ತಿತ್ತು. ಅದು ಮಹಾ ಸಂಗೀತ ಅದನ್ನು ಕೇಳುವ ಅಭ್ಯಾಸವಿತ್ತು. ಅದು ನನ್ನ ಬರಹದ ಪ್ರೇರಣೆ!" ಎಂದು ಉತ್ತರಿಸಿದರು.ಇವರ ಬರಹದಲ್ಲಿ ಸರಳ ಉಪಮೆಗಳಿಂದ, ಸರಳ ಮಾತುಗಳಲ್ಲಿ ಅಬ್ಯಾಸಗೊಂಡಿದೆ. ಇವರ ಬರಹದಿಂದ ಮಲೆಯಾಳಂ ಸಾಹಿತ್ಯವನ್ನು ರಾಷ್ಟ್ರ ಮಟ್ಟಕ್ಕೆ ತಂದಂತಹ ಕೀರ್ತಿ ಇವರಿಗೆ ಸಲ್ಲುತ್ತದೆ.

**ತಂತ್ರ:-**

ಲೇಖಕ ಕೆಲವೊಂದು ಘಟನೆಗಳನ್ನು ಯಾವ ರೀತಿ ಆ ಸಂಗತಿಯನ್ನು ಹಿಡಿದಿಟ್ಟುರುತ್ತಾನೆ ಎಂದರೆ, ಅದರಲ್ಲಿನ ತಂತ್ರಗಾರಿಕೆ ಕೌಶಲ್ಯ ಬಹಳ ಮುಖ್ಯವಾಗಿರುತ್ತದೆ.. ಕೊನೆಯವರೆಗೂ ಕತೆಯ ರಹಸ್ಯವನ್ನು, ಸೂಕ್ಷ್ಮವಿಚಾರವನ್ನು ಕಾಪಾಡಿಕೊಂಡು ಬರುವಂತಹ ಕಲೆಗಾರಿಕೆ/ ತಂತ್ರಗಾರಿಕೆ ಒಬ್ಬ ಲೇಖಕನಿಗೆ ಇರಬೇಕಾದಂತಹ ಬಹುಮುಖ್ಯ ಲಕ್ಷಣದಲ್ಲಿ ಒಂದಾಗಿದೆ. ಓದುಗನನ್ನು ಹಿಡಿದಿಡುವಂತಹ ಶಕ್ತಿ ಕತೆಗಾರನ ಕತಾತಂತ್ರದಲ್ಲಿ ಅಡಗಿರುತ್ತದೆ .

ವೈಕಂ ರವರ ಕಥೆಯಲ್ಲಿ ಕಂಡುಬರುವಂತಹ ವೈಶಿಷ್ಟ್ಯತೆ ಎಂದರೆ, ಅನೇಕ ಕತೆಗಳಲ್ಲಿ ನಾಯಕ, ನಾಯಕಿ, ಊರು, ಸ್ಥಳ ಇತ್ಯಾದಿಗಳಿಗೆ ಸಂಬಂದಿಸಿದಂತೆ ಮಾಹಿತಿಯೇ ಲಭಿಸುವುದಿಲ್ಲ. ಕತೆಯ ಕೊನೆಯವರೆಗೂ ಗೌಪ್ಯತೆಯನ್ನು ಕಾಯ್ದಿರಿಸಿಕೊಂಡು, ಕತೆ ಹೆಣೆಯುವ ಕ್ರಮ ಬಹುತೇಕ ಕತೆಗಳಲ್ಲಿ ಕಂಡುಬರುತ್ತದೆ. ಕೆಲವೊಂದು ಕತೆಗಳು ಪ್ರಬಂಧದ ಮಾದರಿಯಲ್ಲಿವೆ ಮತ್ತು ಸಂವಹನ ರೀತಿ, ನಾಟಕದ, ಸಂಬಾಷಣೆ ರೀತಿಯಲ್ಲಿರುವುದೂ ಕಂಡುಬರುತ್ತದೆ.

'ನೀಲಿಕಂದೀಲು' ಎಂಬ ಕತೆಯಲ್ಲಿ– ಆತ್ಮ ಮತ್ತು ಜೀವಂತಿಕೆಯನ್ನು ಸೃಷ್ಟಿಸಿ ದೆವ್ವದ ಕಲ್ಪನೆಯಲ್ಲಿ ಪ್ರತಿಹಂತದಲ್ಲೂ ಕುತೂಹಲವನ್ನು ಉಂಟುಮಾಡುತ್ತದೆ. ಕೊನೆಯವರೆಗೂ ಅತಿ ಮಾನುಷ ಶಕ್ತಿಯ ರೀತಿಯಲ್ಲಿ ನೀಲಿ ಬೆಳಕು ಮನೆಯನ್ನು ಪಸರಿಸಿರುವುದು ಲೇಖಕ ಅದನ್ನು ಸ್ಪಷ್ಟಪಡಿಸುತ್ತಾರೆ.'ಪ್ರೇಮ ಪತ್ರ' ಈ ಕತೆಯು ಒಂದು ಪತ್ರ ವ್ಯವಹಾರದ ರೀತಿಯಲ್ಲಿ ಕತೆಯನ್ನು ರಚಿಸಿದ್ದಾರೆ.'ಶಬ್ದಗಳು' ಎಂಬ ಕತೆಯಲ್ಲಿ ಕತೆಯ ನಿರೂಪಣೆ ಪ್ರಾರಂಭ ಅಂತ್ಯೆಂಬ ರೀತಿ ಇಲ್ಲದೆ, ಹೇಗೆ ಬೇಕೂ ಹಾಗೆ ಬರೆದಿದ್ದಾರೆ ಕೆಲವೊಂದು ಮುಖ್ಯ ವಿಚಾರಗಳನ್ನು ಶೀರ್ಷಿಕೆ ರೀತಿಯಲ್ಲಿ ನೀಡಿದ್ದಾರೆ.

ಕಥೆಯಲ್ಲಿ ತಮ್ಮ ವೈಯಕ್ತಿಕ ವಿಚಾರಗಳು ಹಾಗೂ ಅನುಭವವನ್ನು ಕುರಿತು ತಮ್ಮನ್ನೇ ಕಥೆಯ ಯಾವುದೋ ಪಾತ್ರದಲ್ಲೋ, ಘಟನೆಯಲ್ಲೋ ತನ್ನನ್ನು ತಾನೇ ವಿಡಂಬಿಸಿಕೊಳ್ಳುವಂತಹ ಸ್ಥಿತಿಯನ್ನು ಕಾಣಬಹುದಾಗಿದೆ. (ಮ್ಯಾಜಿಕ್ ರಿಯಲಿಸಂ–ತಂತ್ರದ ಮೂಲಕ) ಅವಾಸ್ತವತೆಯ ಕಲ್ಪನೆಯಿಂದ –ವಾಸ್ತವದ ಕಲ್ಪನೆ ಕಡೆಗೆ ಬೆಳಕು ಚೆಲ್ಲುತ್ತದೆ.

"ವಾರಸುದಾರರು" ಎಂಬ ಕತೆಯಲ್ಲಿ ಆತ್ಮದ ಪರಿಕಲ್ಪನೆಯನ್ನು ತಂದಿದ್ದಾರೆ. ಪೂರ್ವಜರ ಆತ್ಮದ ತಂತ್ರವನ್ನು ಬಳಸಿರುವಂತದ್ದು ಈ ಕತೆಯಲ್ಲಿ ಮತ್ತೊಂದು ವಿಶೇಷವಾದ ಸಂಗತಿಯಾಗಿದೆ. ಒಂದು ಸಮುದಾಯದ ಜನರ ನಂಬಿಕೆಯನ್ನು ಆಧಾರವಾಗಿಟ್ಟುಕೊಂಡು ಮತ್ತು ಆಧುನಿಕತೆ ತಾಂತ್ರಿಕತೆ ಬಂದದ್ದರಿಂದ ಸಾಧ್ಯವಾಗುವಂತ ಪರಿವರ್ತನೆ ಮಾಡಲು ಹೋಗಿ ಆ ಕಾರ್ಯವು ಫಲಿಸಲಿಲ್ಲ. ಮತ್ತೊಂದು ಕತೆಯಾದ "ಲೋಕ ಪ್ರಸಿದ್ಧ ಮೂಗು" ಈ ಕತೆಯಲ್ಲಿ ಬಳಸಿದಂತಹ ತಂತ್ರ ಒಬ್ಬ ಮನುಷ್ಯನಿಗೆ ದೇಹದ ಅಂಗವ್ಯಕಲ್ಯತೆಯನ್ನು ತಂತ್ರವನ್ನು ಬಳಸಿಕೊಂಡು ಕತೆಯನ್ನು ನಿರೂಪಿಸಿರುವಂತಹ ಕಲೆಗಾರಿಕೆಯನ್ನು ಕತೆಗಳಲ್ಲಿ ನಿರೂಪಿಡಿದ್ದಾರೆ. ಅಂಗವೈಕಲ್ಯತೆಯನ್ನು ಬಂಡವಾಳನ್ನಾಗಿ ಮಾಡಿಕೊಳ್ಳುವಂತಹ ಸ್ಥಿತಿಯನ್ನು ಕಾಣಬಹುದಾಗಿದೆ.

**ವಸ್ತು:–** ವೈಕಂ ಮಹಮ್ಮದ್ ಬಷೀರ್‌ರವರ ಕಥೆಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ವಸ್ತುಗಳೆಂದರೆ– ಮಾನವೀಯತೆಯನ್ನು , ಧಾರ್ಮಿಕ ಸಂಘರ್ಷಗಳು, ಸ್ತ್ರೀ ಸಂವೇದನೆಯ ನೆಲೆಗಳು, ಸಾಮಾಜಿಕ ವಾಸ್ತವ ಬದುಕಿನ ಚಿತ್ರಣ, ಬಡತನ, ಹಸಿವಿನ ಕರಾಳತೆ, ನಿರುದ್ಯೋಗ, ಪ್ರೀತಿಯ ಅಪೇಕ್ಷೆ, ಸರಳ ಆದರ್ಶ ಜೀವನ, ವಿವಾಹ, ಸುಧಾರಣಮಯ ನೆಲೆಗಳು, ಕಳ್ಳರು, ವೇಶ್ಯೆಯರ ಸಮಸ್ಯೆ, ಮಂಗಳಮುಖಿಯರ ಸಮಸ್ಯೆ, ಆತ್ಮದ ಕಲ್ಪನೆ, ಅತಿಮಾನುಷಶಕ್ತಿ, ಸುಮಧುರ ಹಾಸ್ಯ ಪ್ರಜ್ಞೆ ಹಾಗೂ ಕಲ್ಪನಾಶಕ್ತಿ, ಅಣಕು ವಿಡಂಬನೆಗಳ ಮೇಲೆ ಅಸಾಧ್ಯ ಹಿಡಿತವಿದ್ದು, ಅಂತೆಯೇ ಕರುಣೆ, ಸಹಜೀವಿಗಳ ನೋವು–ನಲಿವುಗಳ ಚಿತ್ರಣ, ಸ್ತ್ರೀ ಶೋಷಣೆ, ಸ್ತ್ರೀ ಸಂವೇದನೆ, ಕಾಳಜಗೆ ಸಂಬಂಧಿಸಿದಂತಹ ವಸ್ತುಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ.

ಪ್ರಕೃತಿಯ ಸೊಬಗು, ಸೌಂದರ್ಯ, ಪ್ರಕೃತಿ ನಾಶದಿಂದ ಮನುಷ್ಯ ಜೀವನದ ಮೇಲೆ ಉಂಟಾಗುವಂತಹ ಕಲ್ಪನೆ. ಉದಾ:- ವಾರಸುದಾರರು ಮತ್ತು ಗೋಡೆಗಳಲ್ಲಿ ಗುಲಾಬಿ ಗಿಡವನ್ನು ಜೈಲಿನಲ್ಲಿ ಬೆಳೆಸುವುದು. ಪ್ರಕೃತಿ ವಿಕೋಪ- ಹೂ ಬಾಳೆ ಕಥೆಯಲ್ಲಿ ಜಾತಿ, ಧರ್ಮಕ್ಕೆ ಸಂಬಂಧಿಸಿದ ಕತೆಗಳು ಕಂಡು ಬರುತ್ತವೆ.

**ಕೊನೆಟಿಪ್ಪಣಿ:**

*1. ಸಂದೀಪ್ ನಾಯಕ್ ಪ್ರಜಾವಾಣಿ ಅಂಕಣ ಮುಕ್ತ ಛಂದ(14–06–2015)

*2. ಬಷೀರ್ ಎಂಬ ಬದುಕು (ಮುನ್ನುಡಿ)

*3. ಬಷೀರ್ ಎಂಬ ಬದುಕು (ಮುನ್ನುಡಿ)

# ಅಧ್ಯಾಯ 7

## ಸಮಾರೋಪ

ವೈಕಂ ಮಹಮ್ಮದ್ ಬಷೀರ್ ರವರು ಮಲೆಯಳಂ ಕಥಾಲೋಕದಲ್ಲಿ ಚಿರಸ್ಥಾರವಾದ ಹೆಸರು. ಅವರು ಬರೆಯುವ ಧಾಟಿ, ವಸ್ತು ವೈವಿಧ್ಯತೆ, ಪಾತ್ರಗಳ ನೈಜತೆ ಮುಂತಾದವುಗಳಲ್ಲಿ ಕ್ರಾಂತಿಕಾರಿ ಬದಲಾವಣೆಗಳನ್ನು ತೋರಿಸಿಕೊಡುವುದರ ಮೂಲಕ ತಮ್ಮದೇ ಅದ ವಿಶಿಷ್ಟ ಛಾಪನ್ನು ಒತ್ತಿದ ಬಷೀರ್ ಈ ಶತಮಾನ ಕಂಡ ವಿಸ್ಮಯ ಸೃಷ್ಟಿಕರ್ತ. ಮತ್ತೆ ಮತ್ತೆ ಓದಬೇಕೆನಿಸುವ ಲೇಖಕ. ಅಂತೆಯೇ ಎಷ್ಟು ಸಾರಿ ಓದಿದರೂ ತಮ್ಮ ಸೊಗಸನ್ನೂ, ಹೊಸತನವನ್ನು ಕಳೆದುಕೊಳ್ಳದಂಥ ಕಥೆಗಳನ್ನು ಬರೆದ ಅವರು ಕೇವಲ ಕೇರಳದ ಅವರ ಸಮಕಾಲೀನ ಲೇಖಕರಲ್ಲಿ ಅಥವಾ ಮಲೆಯಾಳಂ ಸಾಹಿತ್ಯದಲ್ಲಷ್ಟೇ ಪ್ರಮುಖರಾಗುವುದಿಲ್ಲ. ಹಾಗೆ ನೋಡಿದರೆ ಯಾವುದೇ ಸಾಹಿತ್ಯದ ಶ್ರೇಷ್ಠ ಲೇಖಕನ ಸಾಲಿನಲ್ಲಿ ನಿಲ್ಲುವಂಥವರು ಬದುಕಿದ್ದಾಗಲೇ ದಂತ ಕಥೆಯಾಗಿದ್ದರು.

ವೈಕಂ ರವರ ಕತೆಗಳಲ್ಲಿ ಸ್ತ್ರೀಸಂವೇದನೆಯ ನೆಲೆಗಳಿಗೆ ಸಂಬಂಧಿಸಿದಂತೆ ಅನೇಕ ವಿಚಾರಗಳನ್ನು ಇಲ್ಲಿ ನೀಡುತ್ತಾ ಹೋಗುತ್ತಾರೆ. ಭಾರತೀಯ ಸಂಸ್ಕೃತಿಯ ಸೂಕ್ಷ್ಮತೆಗಳು, ಧಾರ್ಮಿಕವಾಗಿ ಮಹಿಳೆ ಯಾವ ರೀತಿ ಬಂಧನಕ್ಕೊಳಗಾಗಿದ್ದಾಳೆ ಹಾಗೂ ಜಾತಿಯನ್ನು ಮೀರುವುದಕ್ಕೆ ಆಗದೇ ಇರುವಂತಹ ಸನ್ನಿವೇಶದಲ್ಲಿ ಯಾವ ರೀತಿಯ ನಿರ್ಣಯ ಪಡೆಯುತ್ತಾಳೆ ಎನ್ನುವ ವಿಚಾರ ಕತೆಗಳಲ್ಲಿರುವುದನ್ನು ನನ್ನ ಅಧ್ಯಯನದ ಮೂಲಕ ಸಂಶೋಧಿಸಿದ್ದೇನೆ.

ಆಧುನಿಕ ಮಹಿಳಾ ಪ್ರಜ್ಞೆಯಾಗಿ ಮಹಿಳೆ ತನಗೆ ವಿರೋಧವಾದದ್ದನ್ನೇ ಪ್ರತಿಭಟಿಸುವ, ನಿರಾಕರಿಸುವಂತಹ, ನಿರ್ಣಯಗಳನ್ನು ತೆಗೆದುಕೊಳ್ಳುವ ಮನಸ್ಥಿತಿಯನ್ನು ಸಹ ವೈಕಂ ಬಷೀರ್‌ರವರು ತಮ್ಮ ಬರವಣಿಗೆಯಲ್ಲಿ ಈ ಎಲ್ಲ ಅಂಶಗಳನ್ನು ಹಿಡಿದಿಟ್ಟರುವಂತಹ ಲೇಖಕನಾಗಿ ಕಂಡುಬರುತ್ತಾನೆ.

ಮಾನವೀಯತೆಯನ್ನು ಪ್ರತಿಬಿಂಬಿಸುವ ಕತೆಗಳನ್ನು ಸಹ ವೈಕಂರವರು ಬರೆದಿದ್ದಾರೆ. ಇವರು ಮೂಲತಹ ಸದಾ ಮಾನವೀತೆಯ ಪರ ಒಲವಿದ್ದಂತಹ ವ್ಯಕ್ತಿ ಸಮಾಜದ ವಾಸ್ತವ ನಗ್ನ ಸತ್ಯವನ್ನು ಪ್ರತಿಬಿಂಬಿಸುವಂತಹ ಕತೆಗನ್ನು ಇವರ ಸಾಹಿತ್ಯವು ಜೀವಪರವಾಗಿದ್ದು, ಮಾನವೀಯ ಮೌಲ್ಯಗಳನ್ನು ಒಳಗೊಂಡಿದ್ದು ತಿಳಿದು ಬರುತ್ತದೆ.

'ಹೀಗೊಬ್ಬ ಮನುಷ್ಯ' ಕತೆ ಕಳ್ಳನಾಗಿದ್ದವನು ತನ್ನ ವರ್ತನೆಯನ್ನು ಬದಲಿಸಿಕೊಂಡು ಮತ್ತೆ ಕದ್ದ ಹಣವನ್ನು ಅದೇ ವ್ಯಕ್ತಿಗೆ ಕಷ್ಟಕಾಲದಲ್ಲಿ ಬಂದು ನೆರವಾಗವುದನ್ನು ಇವರ ಕತೆಯಲ್ಲಿ ಚಿತ್ರಿಸಿದ್ದಾರೆ. ಜೀವನದ ಕರಿನೆರಳು ಶಬ್ದಗಳು ಬಂಗಾರಿ, ಈ ಕತೆಗಳೂ ಸಹ ಮಾನವೀಯ ಮೌಲ್ಯಗಳನ್ನು ಕುರಿತು ಕತೆಗಳಲ್ಲಿ ವಿಡಂಬಿಸಿದ್ದಾರೆ.

ಧರ್ಮ, ಜಾತಿಗಳಿಗೆ ಸಂಬಂಧಿಸಿದಂತೆ ಅನೇಕ ವಿಚಾರಗಳನ್ನು ಕಾಣಬಹುದು, ಸರ್ವಧರ್ಮಸಹಿಷ್ಣುತೆಯನ್ನು ಕಾಪಾಡಿಕೊಂಡು ಬರುವಂತಹ ಇವತ್ತಿನ ದಿನದ ಸ್ಥಿತಿಯನ್ನು ಸಹ ಸೂಚಿಸುವಂತಿದೆ "ಪ್ರೇಮ ಪತ್ರ, ಗೋಡೆಗಳು, ಶಬ್ಧಗಳು ಈ ಕತೆಗಳು ಧಾರ್ಮಿಕ ಸಂಘರ್ಷಕ್ಕೆ ಸಂಬಂಧಿಸಿದಂತೆ ಕೆಲವು ಸಂಗತಿಗಳು ಬರುತ್ತವೆ. ಪ್ರೀತಿಯ ಮುಂದೆ, ಜಾತಿ, ಧರ್ಮಕ್ಕೆ ಯಾವುದೇ ರೀತಿಯ ಭಿನ್ನಗಳಿಲ್ಲದಂತೆ ಸೃಷ್ಟಿಗೊಂಡಿವೆ. ಇವರ ಕತೆಗಳಲ್ಲಿ ಸಾಮಾಜಿಕ ಬದಲಾವಣೆಗಳನ್ನು ಬಯಸುವಂತಹ ವ್ಯಕ್ತಿತ್ವ ವೈಕಂ ಮಹಮ್ಮದ್ ರವರ ಕತೆಗಳಲ್ಲಿ ಕಾಣಬಹುದು. ಕೌಟುಂಬಿಕ ಸ್ಥಿತಿಯ ವಾತಾವರಣ, ಮಹಿಳೆಯರ ಸ್ಥಿತಿ, ಗತಿಯನ್ನು ಕುರಿತಂತೆ, ಮಾತೃಪ್ರಧಾನ ಕುಟುಂಬದ ಅಳಿವಿಗೆ ಸಂಬಂಧಿಸಿದಂತಹ ಬದಲಾವಣೆಯನ್ನು ಕುರಿತಂತೆ ವಿಚಾರಗಳು ಇವರ ಕತೆಯಲ್ಲಿ ಕಂಡುಬರುತ್ತದೆ. ವೈಕಂ ಮಹಮ್ಮದ್ ಬಷೀರ್‌ರವರ ಕತೆಗಳಲ್ಲಿ ಕಂಡುಬರುವಂತಹ ಇಂತಹ ಅನೇಕ ಸೂಕ್ಷ್ಮ ಸಂಗತಿಗಳನ್ನು ಮತ್ತು ಅವರ ಕತೆಗಳಲ್ಲಿ ಕಂಡುಬರುವಂತಹ ಕಥಾವಸ್ತುಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಅವರು ವಾಸ್ತವಕ್ಕೆ ಹತ್ತಿರವಾದ ಮತ್ತು ಇಂದಿನ ದಿನಕ್ಕೂ ಅದರ ಪ್ರಸ್ತುತತೆಯನ್ನು ಹೇಳುವಂತಹ ವಸ್ತುಗಳನ್ನು ಒಳಗೊಂಡಿರುವುದು ಇವರ ಕತೆಗಳ ವಿಶೇಷಗಳಲ್ಲಿ ಒಂದೆನಿಸಿದೆ. ತಮ್ಮ ವೈಯಕ್ತಿಕ ಜೀವನದ ಸಿಹಿ ಕಹಿ ಅನುಭವಗಳನ್ನು ಕತೆಯಲ್ಲಿ ತಂದಿರುವುದು ವಿಶೇಷಕಾರಿಯಾಗಿದೆ. ಮತ್ತು ಇವರು ಕೆಲವು ಕಡೆ ತನ್ನನ್ನೇ ಕೆಲವು ಪಾತ್ರಗಳಲ್ಲಿ ಪ್ರತಿಬಿಂಬಿಸಲು ಹೊರಟಿದ್ದಾರೆ.

**ಉದಾ:** ಗೋಡೆಗಳು ಕತೆಯಲ್ಲಿ ಜೈಲಿನಲ್ಲಿ ಸೆರೆಯಾಗಿರುವಂತಹ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ.

ಸಾಮಾನ್ಯವಾಗಿ ಇವರ ಕತೆಗಳಲ್ಲಿ ಬಹುಮುಖ್ಯವಾಗಿ ಕಂಡುಬರುವಂತಹ ವಸ್ತು ವಿಷಯಗಳೆಂದರೆ, ಬಡತನ, ಹಸಿವು, ನಿರುದ್ಯೋಗ, ಹುಸಿಕ್ರಾಂತಿಕಾರರು, ಕಳ್ಳರು, ಮೈಮಾರಿಕೊಂಡರೂ ಮನುಷ್ಯತ್ವವಿರುವ ಸೂಳೆಯರು, ನಪುಂಸಕರು, ರಾಷ್ಟ್ರೀಯ ಪ್ರಜ್ಞೆ, ಮುಗ್ಧತೆ, ಇತ್ಯಾದಿ ವಿಚಾರಗಳನ್ನು ಕಾಣಬಹುದು. ಸಮಾಜದ ಬಹುಮುಖಿಯಾದ ಎಲ್ಲ ರೀತಿಯ ಪಾತ್ರಗಳನ್ನು ಸೃಷ್ಟಿಸಿ ಅದಕ್ಕೆ ಜೀವ ತುಂಬಿ ತಮ್ಮ ತಮ್ಮ ಅನುಭವದ ಹಿನ್ನೆಲೆಯಲ್ಲಿ ಕತೆಗಳನ್ನು ಕಟ್ಟಿಕೊಟ್ಟಿದ್ದಾರೆ.

ಇವರ ಕತೆಗಳು ಸ್ವಾರ್ಥವಿಲ್ಲದ ಪ್ರೀತಿಯ ನೆಲೆಯನ್ನು ಹುಡುಕುವಂತಹ ಶೋಧಮಾಡುತ್ತಿವೆ. "ಜೀವನದ ಕರಿನೆರಳು" ಪ್ರೇಮ ಪತ್ರ, ಏಕಾಂತದ ತೀರ, ಗೋಡೆಗಳು, ಒಂದು ಹಳೆಯ ಪ್ರೇಮಕತೆ ಈ ಕತೆಗಳಲ್ಲಿ ಪ್ರೀತಿಯನ್ನು ಪಡೆಯುವ ಪ್ರಯತ್ನಗಳು, ಸಾಹಸಗಳನ್ನು ಈ ಕತೆಗಳಲ್ಲಿ ಪ್ರಮುಖವಾಗಿ ಕಂಡುಬರುವಂತಹ ವಿಚಾರಗಳಾಗಿ ಕಂಡುಬರುತ್ತವೆ.

ಕತೆಗಳಲ್ಲಿ ವಾಸ್ತವ ಕಲ್ಪನೆ ಮತ್ತು ಅವಾಸ್ತವಕ್ಕೆ ಸಂಬಂಧಿಸಿದಂತೆ ನೀಲಿಕಂದೀಲು ಕತೆಯ ಭಾರ್ಗವಿ ಎನ್ನುವ ಆತ್ಮಕ್ಕೆ ಸಂಬಂಧಿಸಿದಂತೆ ವಿಷಯಗಳು ಪ್ರಸ್ತಾಪಿತಗೊಳ್ಳುತ್ತವೆ. ಆತ್ಮ ಮತ್ತು ಜೀವದ ನೆಲೆಗೆ ಸಂಬಂಧಿಸಿದಂತಹ ಕಾಲ್ಪನಿಕ ಜಗತ್ತಿನ ಬಗ್ಗೆ ವಿಚಾರಗಳು ಕಂಡುಬರುತ್ತವೆ. ಅವಾಸ್ತವ ಕಲ್ಪನೆಯನ್ನು ಹೇಳುತ್ತಾ, ವಾಸ್ತವ ಜಗತ್ತಿನ ದರ್ಶನವನ್ನು ಮಾಡಿಸುವಂತಹ ತಂತ್ರಗಾರಿಕೆಯನ್ನು ಬಳಸಿಕೊಂಡಿದ್ದಾರೆ. ಪ್ರಸ್ತುತ ಜನಸಾಮಾನ್ಯರ ವಾಸ್ತವ ಮನಸ್ಥಿತಿಯನ್ನು ಪರಿಗಣಿಸಿ ಕತೆಯನ್ನೇ ಕಟ್ಟುವಂತಹ ಮೊನಚುನತದ ವಿಡಂಬನೆಯನ್ನು ವೈಕಂ ರವರ ಕತೆಗಳಲ್ಲಿ ನಾನು ಸಂಶೋಧಿಸಿದ್ದೇನೆ.

ಜೀವನದ ಕರಿನೆರಳು, ಬಂಗಾರಿ, ಶಬ್ದಗಳು, ವಾರಸುದಾರರು, ಯುದ್ಧಮುಗಿಯುವುದಾದರೆ, ಮುಂತಾದ ಕತೆಗಳು ಒಂದೊಂದು ಸಹ ಉತ್ತಮ ಮೌಲ್ಯಗಳನ್ನು ಒಳಗೊಂಡಿರುವುದು ಅದನ್ನು ಅಧ್ಯಯನದ ಹಿನ್ನೆಲೆಯಾಗಿ ಗಮನಿಸಿದಾಗ ಅನೇಕ ವಿಚಾರಗಳನ್ನು ಕತೆಯು ಪ್ರತಿನಿಧಿಸುತ್ತಿರುತ್ತದೆ ಉದಾ:– ಜೀವನದ  ಕರಿನೆರಳು, ಈ ಕತೆಯಲ್ಲಿ ಮಾನವೀಯ ಗುಣಗಳಿಗೆ ಸಂಬಂಧಿಸಿದಂತಹ ಸನ್ನಿವೇಶಗಳು ಬರುತ್ತದೆ. ಸ್ತ್ರೀ ಸಂವೇದನೆಯ ಹಿನ್ನೆಲೆಯಲ್ಲಿಯೂ ಅನೇಕ ವಿಚಾರಗಳು ಕಂಡುಬರುತ್ತದೆ. ನಿಸ್ವಾರ್ಥ ಪ್ರೀತಿಯ ರೂಪವಾಗಿಯೂ ಈ ಕತೆ ಸಂವಾದಿಸುತ್ತದೆ. ಮತ್ತು ಸಾಮಾಜಿಕ ಪರಿಸರ, ಕುಟುಂಬ, ಜೀವನದ ಅನೇಕ ಆಯಾಮಗಳನ್ನು ಒಂದೇ ಕತೆಯ ಚೌಕಟ್ಟಿನಲ್ಲಿ ಹಿಡಿದಿಟ್ಟಿರುವಂತಹ ಸಾಮರ್ಥ್ಯವನ್ನು ಈ ಕತೆ ಪ್ರತಿಬಿಂಬಿಸುತ್ತದೆ.

ಮನುಷ್ಯನ ದೇಹದ ಪ್ರತಿಬಿಂಬ / ನೆರಳು ಹೇಗೆ ಅವನನ್ನು ಹಿಂಬಾಲಿಸುತ್ತದೆಯೋ ಹಾಗೆಯೇ ಜೀವನದ ಅನೇಕ ಬವಣೆಗಳಿಗೆ ಮನುಷ್ಯನು ಗಂಟುಬಿದ್ದಿರುತ್ತಾನೆ. ಅದೇ ರೀತಿಯಲ್ಲಿ ಎಲ್ಲಾ ಕತೆಗಳು ಸಹ ಅನೇಕ ವಿಭಿನ್ನ ದೃಷ್ಟಿಕೋನದಿಂದ ವಿಚಾರಗಳನ್ನು ಕತೆಯು ಒಳಗೊಂಡಿರುವುದು ತಿಳಿದುಬರುತ್ತದೆ.

ಬಷೀರ್‌ನನ್ನು ಒಬ್ಬ ಪ್ರೇಮಿ. ಮಹಾಹುಚ್ಚ ಎಂದು ಕರೆಯುತ್ತಾರೆ. ಇವರ ಕತೆಗಳಲ್ಲಿ ಅರೇಬಿಯಾದ ಕವಿ ಖಲೀಲ್ ಗಿಬ್ರಾನನ ಪ್ರಭಾವವನ್ನು ಕಾಣಬಹುದು. ಅವರ ಕತೆಗಳನ್ನು ಅಥವಾ ಸಾಹಿತ್ಯವನ್ನು ಗಮನಿಸಿದಾಗ ಅದರಲ್ಲಿ ಪ್ರೀತಿ ರಾಗ ದ್ವೇಷ ಇವರ ಕತೆಗಳನ್ನು ಆವರಿಸರುವಂತಹ ವಿಷಯ ವಸ್ತುಗಳಾಗಿರುತ್ತವೆ. ಪ್ರೀತಿಯ  ಮುಗ್ಧತೆಯಾಗಿರಬಹುದು, ನಿಸ್ವಾರ್ಥ ಮನೋಭಾವದ ಪ್ರೀತಿಯನ್ನು ಇವರ ಕತೆಗಳಲ್ಲಿರುವುದನ್ನು ನನ್ನ ಅಧ್ಯಯನದಿಂದ ಸಂಶೋಧಿಸಿದ್ದೇನೆ. ಬದುಕಿಗೆ ಬರೀ ಕಷ್ಟ –ನೋವು – ಹಸಿವು – ಬಡತನ ಇವಿಷ್ಟೇ ಜೀವನ ಅಲ್ಲ ಅದರಾಚೆಗಿನ ಒಂದು ಒಲವು ನಲಿನ್ನು ಕಾಣಬೇಕೆನ್ನುವಂತಹ ಆಲೋಚನಾ ಕ್ರಮವು ಮೆಚ್ಚುಗೆಗೆ ಅರ್ಹವಾದಂತದ್ದು.

ಇಂದಿನ ಪ್ರೀತಿಯು ಸ್ವಾರ್ಥ, ಮೋಸ, ವಂಚನೆಯಿಂದ ಪ್ರೀತಿಯ ಪಾವಿತ್ರತೆಯನ್ನು ಹಾಳುಮಾಡುವಂತಹ ಈ ಕಾಲಕ್ಕೂ ಸಮನ್ವಯವಾಗುವಂತಹ ಆಲೋಚನೆಯನ್ನು ಹೊಂದಿರುವಂತದ್ದು ಇವರ ಕತೆಗಳಾದ ಜೀವನದ ಕರಿನೆರಳು ಪ್ರೇಮ ಪತ್ರ, ಏಕಾಂತದ ತೀರ ಗೋಡೆಗಳು, ಒಂದು ಹಳೆಯ ಪ್ರೇಮಕಥೆ, ಹೂಬಾಳೆ ಈ ಕತೆಗಳ ಮೂಲಕ ಪ್ರೀತಿಯಲ್ಲಿ ನಿಸ್ವಾರ್ಥತೆಯನ್ನು ಹುಡುಕುವಂತಹ ಕಾರ್ಯವನ್ನು ನನ್ನ ಸಂಶೋಧನೆಯಲ್ಲಿ ಮಾಡಿದ್ದೇನೆ.

ಹೀಗೆ ವೈಕಂ ಬಷೀರ್ ರವರು ತಮ್ಮ ಕತೆಳ ಮೂಲಕ ಜೀವನದೊಂದಿಗೆ ಬೆರತು ಹೋಗಿರುವಂತಹ ಅನೇಕ ವಾಸ್ತವ ಸಂಗತಿಗಳನ್ನು ಕತೆಗಳ ಮೂಲಕ ಹಿಡಿದಿಟ್ಟಿದ್ದಾರೆ. ಈ ಸಂಗತಿಗಳನ್ನು ನನ್ನ ಅಧ್ಯಯನದ ಮೂಲಕ ಅವುಗಳನ್ನು ವಿಮರ್ಶಿಸುವ ಹಾಗೂ ಸಂಶೋಧಿಸುವುದಕ್ಕೆ ಈ ಒಂದು ಅಧ್ಯಯನ ನನಗೆ ಸಹಾಯಕಾರಿ ಹಾಗೂ ಪರಿಣಾಮಕಾರಿಯಾಗಿ ಕಂಡು ಬಂದಿದೆ ಎನ್ನುವುದು ನನ್ನ ಅಭಿಪ್ರಾಯವಾಗಿದೆ.

## ಪರಾಮರ್ಶನ ಗ್ರಂಥ


1. ವೈಕಂ ಕಥೆಗಳು – ಎಸ್. ಗಂಗಾಧರಯ್ಯ
   ಬಿಸಲ ಕೋಲು ಪ್ರಕಾಶನ – ತಿಪಟೂರು (2006)
2. ಸಣ್ಣಕತೆ ಸ್ವರೂಪ ವಿನ್ಯಾಸ – ಡಾ.ಎಸ್.ಪ್ರಸಾದ ಸ್ವಾಮಿ ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆ ಬೆಂಗಳೂರು (2011)
3. ಮಲಯಾಳಂನ ಶ್ರೇಷ್ಟ ಕಥೆಗಳು – ಕೆ.ಕೆ.ಗಂಗಾಧರನ್ ನವ ಕರ್ನಾಟಕ ಪ್ರಕಾಶನ (2014)
4. ಮಲಯಾಳಂ ಕತೆಗಳು – ಕೆ.ಎಸ್.ಕರುಣಾಕರನ್ ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜಪೇಟೆ ಬೆಂಗಳೂರು (2002)
5. ಆಯ್ದ ಮಲಯಾಳ ಸಣ್ಣ ಕಥೆಗಳು – ಸಂಪಾದಕರು ಎಸ್.ಗುಪ್ತನಾಯರ್ ಅನುವಾದ : ಕೆ.ಕೆ.ನಾಯರ್ (ಸಾಹಿತ್ಯ ಅಕಾಡೆಮಿ ರವೀಂದ್ರ ಭವನ – ನವದೆಹಲಿ (1996)
6. ಕನ್ನಡ ಸಣ್ಣ ಕಥೆಗಳು – ಸಂಪಾದಕರು ಜಿ.ಎಚ್.ನಾಯಕ್ (ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ– ಹೊಸದೆಹಲಿ (2010)
7. ಕನ್ನಡ ಸಾಹಿತ್ಯ ಚರಿತ್ರೆ – ರಂ.ಶ್ರೀ. ಮುಗಳಿ (ಗೀತಾಬುಕ್‌ಹೌಸ್ ಪ್ರಕಾಶಕರು – ಮೈಸೂರು (2005)
8. ಸಾಹಿತ್ಯ ಅಧ್ಯಯನ – 7 ಕನ್ನಡ ಐಚ್ಛಿಕ ಪತ್ಯ ಬಿ.ಎ–ಡಾ॥ ಸಿ.ಬಿ.ಹೊನ್ನುಸಿದ್ಧಾರ್ಥ (ಪ್ರಸಾರಂಗ ಬೆಂಗಳೂರು ವಿಶ್ವವಿದ್ಯಾಲಯ ಜ್ಞಾನಭಾರತಿ, ಬೆಂಗಳೂರು–(2013)
9. ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನದ ಒಂದು ಪ್ರವೇಶಿಕೆ – ಡಾ.ಡಿ.ಮಂಗಳಾ ಪ್ರಿಯದರ್ಶಿನಿ (ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವವಿದ್ಯಾಲಯ ಹಂಪಿ (2007)
10. ಬಾಣ ಕಾದಂಬರಿ – ಗಂಗಾಧರ ಮಡಿವಾಳೇಶ್ವರ ತುರಮರಿ. (ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜಪೇಟೆ ಬೆಂಗಳೂರು (2009)
11. ಸ್ತ್ರೀವಾದಿ ಸಾಹಿತ್ಯ ವಿಮರ್ಶೆ – ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ (ಅಭಿನವ ಮಾರೇನಹಳ್ಳಿ ವಿಜಯನಗರ, ಬೆಂಗಳೂರು (2014)
12. ಅಂತರ್ಜಾಲದಿಂದ ಚಿತ್ರ ಸಂಗ್ರಹ.
13. ವೈಕಂ ಮಹಮ್ಮದ್ ಬಗೆಗಿನ ಸಿ.ಡಿ. ವೀಕ್ಷಣೆಯ ಮಾಹಿತಿ ಸಂಗ್ರಹ –ಕೇಂದ್ರ ಸಾಹಿತ್ಯ ಅಕಾಡೆಮಿ.
14. ಹೊಸಗನ್ನಡ ಸಾಹಿತ್ಯ ಚರಿತ್ರೆ – ಎಲ್.ಎಸ್.ಶೇಶ್‌ಗಿರಿರಾವ್

15. ಮಹಿಳಾ ಅದ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು– ಡಾ. ಪ್ರೀತಿ ಶುಭಚಂದ್ರ (2002)

16. ಭಾಶಾಂತರದ ಸಾಂಸ್ಕೃತಿಕ ನೆಲೆಗಳು –ಡಾ.ಕರೀಗೌಡ ಬೀಚನಹಳ್ಳಿ. (1999)

17. ವಸಾಹತುಶಾಹಿ ಮತ್ತು ಭಾಷಾಂತರ –ವಿ.ಬಿ ತಾರಕೇಶ್ವರ್ (2006)

